ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೪೧ ಸೆಪ್ಟೆಂಬರ್ ೨೦೦೫ ಸಂಚಿಕೆ ೯




ದಾವಣಗೆರೆಯಲ್ಲಿ ಶ್ರೀ ಸೋಮೇಶ್ವರ ದೇವಸ್ಥಾನ ಮಹದ್ವಾರದ ಉದ್ಘಾಟನೆ ಮತ್ತು ಪದ್ಮಶ್ರೀ ಚಿಂದೋಡಲೀಲಾ ಕಲಾಕ್ಷೇತ್ರದ ಶಂಖು ಸ್ಥಾಪನೆ ಸಮಾರಂಭವು ಸಿದ್ಧಗಂಗಾ ಮಠದ ಡಾ. ಶಿವಕುಮಾರ ಸ್ವಾಮೀಜಿ, ಸಿರಿಗೆರೆ ಬೃಹ್ಮಠದ ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಸ್ವಾಮೀಜಿಯುವರ ಸಾನ್ನಿಧ್ಯದಲಿ ನೆರವೇರಿತು. ಮಾಜಿ ಸಚಿವರಾದ ಶ್ರೀ ವಿ. ಸೋಮಣ್ಣ, ದಾವಣಗೆರೆ ವಿರಕ್ತಮಠದ ಶ್ರೀ ಜಯಮೃತ್ಯುಂಜಯ ಸ್ವಾಮೀಜಿ, ಊರವಕೊಂಡ ಗವಿಮಠದ ಶ್ರೀ ಶ್ರೀ ಚೆನ್ನಬಸವ ಸ್ವಾಮೀಜಿ, ದಾವಣಗೆರೆ ಹಿರೇಮಠದ ಡಾ. ಸದ್ಯೋಜಾತ ಶಿವಾಚಾರ್ಯ ಸ್ವಾಮೀಜಿ, ಅ.ಭಾ.ಶ.ಸಾ. ಪರಿಷತ್ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸವಪ್ಪನವರು ಉಪಸ್ಥಿತರಿದ್ದರು.



ಸಿದ್ಧಗಂಗಾ ಶ್ರೀಗಳವರಿಂದ ಸಮಾರಂಭದ ಉದ್ಘಾಟನೆ



ಸಿದ್ಧಗಂಗಾ ಶ್ರೀಗಳವರಿಂದ ಚಿಂದೋಡಿಲೀಲ ಕಲಾಕ್ಷೇತ್ರದ ಶಂಖು ಸ್ಥಾಪನೆ



ಸಿದ್ಧಗಂಗಾ ಶ್ರೀಗಳವರಿಂದ ದೇವಾಲಯದ ಮಹಾದ್ವಾರದ ಉದ್ಘಾಟನೆ. ಸಿರಿಗೆರೆ ಜಗದ್ಗುರುಗಳು, ಊರವಕೊಂಡ ಜಗದ್ಗುರುಗಳು, ಚಿಂದೋಡಿಲೀಲಾ, ಚಿಂದೋಡಿ ರಾಜಶೇಖರ್ ಮುಂತಾದವರು ಹಾಜರಿದ್ದರು.




ಮುಖಪುಟ

ದಾವಣಗೆರೆ ನಗರದಲ್ಲಿ ಜರುಗಿದ ಶ್ರೀ ಸೋಮೇಶ್ವರ ದೇವಸ್ಥಾನದ ಮಹಾದ್ವಾರದ ಉದ್ಘಾಟನೆ ಹಾಗೂ ಪದ್ಮಶ್ರೀ ಚಿಂದೋಡಿಲೀಲಾ ಕಲಾಕ್ಷೇತ್ರದ ಶಂಕುಸ್ಥಾಪನೆ ಸಮಾರಂಭವು ಶ್ರೀ ಸಿದ್ಧಗಂಗಾ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ನೆರವೇರಿತು.


ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – 572 104.

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. 5, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – 560 054.
ದೂರವಾಣಿ : 23604087






॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೪೧ ಸೆಪ್ಟೆಂಬರ್ ೨೦೦೫ ಸಂಚಿಕೆ : ೯


## ಒಳಪುಟಗಳಲ್ಲಿ..........




| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/- |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೧೦೦೦/- |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೦.೦೦ |



## ಶಿಕ್ಷಕರ ದಿನಾಚರಣೆ ....

"ಡಾ ರಾಧಾಕೃಷ್ಣನ್‌ರು ಆದರ್ಶ ಶಿಕ್ಷಕರಾಗಿ, ತತ್ವಜ್ಞಾನಿಯಾಗಿ, ಶಿಕ್ಷಣ ತಜ್ಞರಾಗಿ, ರಾಜಕೀಯ ಮುತ್ಸದ್ದಿಯಾಗಿ, ವಿಶ್ವಕುಟುಂಬಿಯಾಗಿ ಹೆಸರುವಾಸಿಯಾದವರು. ಲೋಕ ನಿಬ್ಬೆರಗಾಗುವಂತಹುದು ಅವರ ಅನುಪಮ ವ್ಯಕ್ತಿತ್ವ. ಭವ್ಯದಿವ್ಯರು ಅವರು. ಭವ್ಯರು – ಏಕೆಂದರೆ ಒಬ್ಬ ಶಿಕ್ಷಕ ಏರಬಹುದಾದ ಎತ್ತರಕ್ಕೆ, ರಾಷ್ಟ್ರಪತಿಯಾಗುವಷ್ಟು ಎತ್ತರಕ್ಕೆ ಏರಿದರು. ದಿವ್ಯರು ಏಕೆಂದರೆ ತಮ್ಮ ಜನ್ಮದಿನವನ್ನು (೫.೯.೧೮೮೮) ಶಿಕ್ಷಕರ ದಿನವನ್ನಾಗಿ ಆಚರಿಸುವ ಸಂಸ್ಕೃತಿಯನ್ನು ಆಚರಣೆಗೆ ತಂದುದಕ್ಕಾಗಿ.

"ಮಾನವರೆಲ್ಲರೂ ಒಂದೇ ಎಂಬುದನ್ನು ನಂಬುವಂತೆ ಜನರಿಗೆ ಬಾಲ್ಯದಿಂದಲೇ ಶಿಕ್ಷಣಕೊಡಬೇಕು. ಶಾಂತಿರಕ್ಷಣೆಯ ಮನೋಧರ್ಮವು ಅವರಲ್ಲಿ ವೃದ್ಧಿಯಾಗುವಂತೆ ಮಾಡಬೇಕು. ಮಾನವವರ್ಗವೇ ಒಂದು ಕುಟುಂಬವೆಂಬುದು ಅವರಿಗೆ ಮನವರಿಕೆಯಾಗುವಂತೆ ಮಾಡಬೇಕು".

"ಸ್ವದೇಶಾಭಿಮಾನವು ಶ್ರೇಷ್ಠವಾದ ಗುಣ, ಆದರೆ ಅದು ನಿರ್ದೋಷವಾಗಿರಬೇಕು".

"ಜನರ ಅಂತಃಕರಣಗಳು ಒಂದಾಗಬೇಕು. ಜನರಲ್ಲಿ ತಾವೆಲ್ಲರೂ ಒಂದೇ ಎಂಬ ಆತ್ಮೀಯತೆಯು ವೃದ್ಧಿಯಾಗಬೇಕು. ಇದು ಸಾಧ್ಯವಾಗಬೇಕಾದರೆ ಇಂದಿನ ಸನ್ನಿವೇಶದಲ್ಲಿ ವಿಲಕ್ಷಣವಾಗಿ ತೋರುವ ಪ್ರಾಚೀನಕಾಲದ ಆಲೋಚನಾ ಸರಣಿಗಳನ್ನು, ಗೊಡ್ಡು ನಂಬಿಕೆಗಳನ್ನು, ಅರ್ಥವಿಲ್ಲದ ಆಚರಣೆಗಳನ್ನು ಬಿಟ್ಟುಬಿಡುವುದು ಅತ್ಯವಶ್ಯವಾಗಿ ನಡೆಯಬೇಕಾದ ಪೂರ್ವಸಿದ್ಧತೆ" (ಡಾ. ಸರ್ವಪಲ್ಲಿ ರಾಧಾಕೃಷ್ಣನ್ – ಪ್ರೊ|| ಸಿದ್ದಣ್ಣ ಲಂಗೋಟಿ).

ಶಿಕ್ಷಕರು ಇವುಗಳನ್ನು, ಡಾ|| ಸರ್ವಪಲ್ಲಿಯವರ ಈ ಚಿಂತನೆಗಳನ್ನು ಗಂಭೀರವಾಗಿ ಗಮನಿಸುವ ಅಗತ್ಯವಿದೆ. ಭವಿಷ್ಯತ್ತಿನ ಜನಾಂಗವನ್ನು ರೂಪಿಸುವ ಶಿಲ್ಪಿಗಳಾದ ಶಿಕ್ಷಕರು ಇಂದು ಜಾಗೃತ ಮನಸ್ಕರಾಗಬೇಕು. ಹೌದು. ಇಂದು "ವಿದ್ಯೆ ಬಂತ, ವಿನಯ ಹೋಯ್ತು; ಬುದ್ಧಿ ಬಂತು, ಶ್ರದ್ಧೆ ಹೋಯ್ತು; ಶ್ರದ್ಧೆಬಂತು, ವಿವೇಚನೆ ಹೋಯ್ತು; ಸಮೃದ್ಧಿಬಂತು ಸಂಸ್ಕೃತಿ ಹೋಯ್ತು; ವಿಜ್ಞಾನ ಬಂತು, ಸಮಾಧಾನ ಹೋಯ್ತು; ಶರೀರಸ್ವಾಸ್ಥ್ಯಬಂತು, ಚಿತ್ತಸ್ವಾಸ್ಥ್ಯ ಹೋಯ್ತು; ದೀರ್ಘಾಯುಷ್ಯ ಬಂತು, ಜೀವನ ಸ್ವಾರಸ್ಯ ಹೋಯ್ತು; ಬೋಧನೆ ಬಂತು ಸಾಧನೆ ಹೋಯ್ತು; ಮಾತು ಬಂತು ಕೃತಿಯು ಹೋಯ್ತು; ಜಾತಿ ಬಂತು ಪ್ರೀತಿ ಹೋಯ್ತು; ಸ್ವಾತಂತ್ರ್ಯಬಂತು ಸೌಜನ್ಯ ಹೋಯ್ತು" ಎನ್ನುವ ಡಾ|| ಸಿದ್ಧಯ್ಯ ಪುರಾಣಿಕರ ನುಡಿಗಳು ಎಷ್ಟೊಂದು ಪ್ರಸ್ತುತ. 'ಬಂತು-ಹೋಯ್ತು'ಗಳ ನಡುವೆ ಕಳೆದುಕೊಂಡದ್ದು ಏನನ್ನು ಎಂಬುದರ ಚಿಂತನೆ ಶಿಕ್ಷಕ ಸಮುದಾಯದಲ್ಲಿ ಮಂಥನವಾಗುವುದು ಅವಶ್ಯಕವೆನಿಸಲಾರದೆ? ಪುರಾಣಿಕರ ಎಲ್ಲ ಮಾತುಗಳ ಆಳದಲ್ಲಿರುವ ಸತ್ಯದರ್ಶನ ಶಿಕ್ಷಕರಿಗಾದರೆ ಯುವಜನಾಂಗ ಶಿವಮುಖಿಯಾಗಿ ಬೆಳೆದೀತು. ಹಾಗಾಗಲೆಂದು 'ಸಿದ್ಧಗಂಗಾ' ಆಶಿಸುತ್ತದೆ.

"ಸಿದ್ಧಗಂಗಾ" ಒಂದು ಪುಸ್ತಕದ ವಿಷಯವನ್ನಿಲ್ಲಿ ಪ್ರಸ್ತಾಪಿಸಬಯಸುತ್ತದೆ. "ನಲ್ನುಡಿ ನಿಘಂಟು". ಮೇ ೩೦, ೨೦೦೫ರಂದು ಬಿಡುಗಡೆಯಾಗಿದೆ. ಪ್ರಕಟಿಸಿದವರು ಶ್ರೀ ಶಾರದಾ ಮಂದಿರ ವಿದ್ಯಾಸಂಸ್ಥೆ (ರಿ.,) ಬೆಳಗೆರೆ, ಚಳ್ಳಕೆರೆ ತಾ. ಚಿತ್ರದುರ್ಗ ಜಿಲ್ಲೆ. ನಿಘಂಟುಕಾರರು ಒಬ್ಬ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿದ್ದವರು. ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಮಲ್ಲಪ್ಪನಹಳ್ಳಿಯಲ್ಲಿ ವಾಸವಾಗಿದ್ದ ಒಬ್ಬ ಕನ್ನಡಾಭಿಮಾನಿ ಪ್ರಬುದ್ಧಪಂಡಿತರು. ಶಿಕ್ಷಕರ ಹೆಸರು ಎಚ್. ಅಲ್ಲಿಸಾಬ್. "ಅವರು ಈ ನಿಘಂಟಿಗಾಗಿ ಶಬ್ದ ಶೇಖರಣೆ ಮಾಡಲು ಪ್ರಾರಂಭಿಸಿದ್ದು ೧೨.೧೨.೧೯೩೦ ರಿಂದ ೧.೪.೧೯೫೫ರವರೆಗೆ. ಅಂದರೆ ಇಲ್ಲಿಗೆ ಎಪ್ಪತ್ತೈದು ವರ್ಷಗಳ ಹಿಂದೆ. ಅವರು ಕನ್ನಡ ಉಪಾಸಕರು; ಸಂಸ್ಕೃತಪ್ರಿಯರು. ಪ್ರಾಚೀನ ಕನ್ನಡ ಕಾವ್ಯಗಳನ್ನು 'ಓದುವವರಿಗೆ ಇದು ಹೆಚ್ಚು ಉಪಕಾರಿ' – ಎಂದಿದ್ದಾರೆ ಶ್ರೀಮಠದ ಹಳೆಯ ವಿದ್ಯಾರ್ಥಿಗಳಾದ – ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರು ಮುನ್ನುಡಿಯಲ್ಲಿ. ನಿಘಂಟಿನಲ್ಲಿ ಇಪ್ಪತ್ತು ಸಾವಿರ ಪದಗಳಿಗೆ ಅರ್ಥವಿವರಣೆಯಿದೆ. "ಇದು ಒಬ್ಬ ಪ್ರಾಥಮಿಕ ಶಾಲೆಯ ಉಪಾಧ್ಯಾಯನ ಪ್ರಯತ್ನವೆಂದರೆ – ಆಶ್ಚರ್ಯವಾಗದೆ ಇನ್ನೇನು?" ಎನ್ನುತ್ತಾರೆ ಹಿರಿಯ ಕನ್ನಡ ವಿದ್ವಾಂಸರಾದ 'ನಡೆದಾಡುವ ನಿಘಂಟುನಿಧಿರತ್ನ'ರೆಂದೇ ಹೆಸರಾದ ಪ್ರೊ. ಜಿ. ವೆಂಕಟಸುಬ್ಬಯ್ಯನವರು. ಈ ನಿಘಂಟನ್ನು ಬೆಳಕಿಗೆ ತಂದ ಶ್ರೀ ಬೆಳಗೆರೆ ಕೃಷ್ಣಶಾಸ್ತ್ರಿಗಳ ಸೇವೆ ಸ್ಮರಣೀಯವಾದುದಾಗಿದೆ. ಆದರ್ಶ ಶಿಕ್ಷಕರೆಂದು ರಾಷ್ಟ್ರಪ್ರಶಸ್ತಿ ಪುರಸ್ಕೃತ ಶಾಸ್ತ್ರಿಯವರ ಅಭಿಮಾನ ದೊಡ್ಡದು. ಅನುಕರಣೀಯಕೂಡ.

ಶಿಕ್ಷಕರ ದಿನಾಚರಣೆಯ ಸಂದರ್ಭದಲ್ಲಿ ಶ್ರೀ ಅಲ್ಲಿಸಾಬ್‌ರಂಥ ಶಿಕ್ಷಕ ಶ್ರೇಷ್ಠರನ್ನು ನೆನೆಯುವದೂ ಒಂದು ಸಂತೋಷವೆಂದೇ "ಸಿದ್ಧಗಂಗಾ" ಭಾವಿಸುತ್ತದೆ.

– ಸಂಪಾದಕ







## ಆದರ್ಶ ಶಿಕ್ಷಕ

**ಒಂ**ದು ಕಾಲವಿತ್ತು ಶಿಕ್ಷಕರನ್ನು ದೇವರ ಸಮಾನವಾಗಿ ಕಾಣುತ್ತಿದ್ದ ಕಾಲ. ಶಿಕ್ಷಕ ಧರ್ಮಭೀರುವಾಗಿದ್ದ. ನೀತಿಸಂಪನ್ನನಾಗಿದ್ದ. ಆಚಾರ ನಿಷ್ಠನಾಗಿದ್ದ. ವಿಚಾರವಂತನೆನಿಸಿದ್ದ. ಜ್ಞಾನರತ್ನನಾಗಿದ್ದ ಎಲ್ಲಕ್ಕೂ ಹೆಚ್ಚಿನದಾಗಿ ದಯಾಪೂರ್ಣನಾಗಿದ್ದ ತನ್ನ ಬಳಿಗೆ ಬಂದ ವಿದ್ಯಾರ್ಥಿಗಳನ್ನು ತನ್ನ ಮಕ್ಕಳೆಂದೇ ಭಾವಿಸಿ ಅವರನ್ನು ಎಚ್ಚರವಿಟ್ಟು ಬೆಳೆಸುತ್ತಿದ್ದ. ಶಾಲಾವೇಳೆಗಷ್ಟೇ ಸೀಮಿತನಾಗುತ್ತಿರಲಿಲ್ಲ. ತನ್ನ ಮನೆಯಲ್ಲೇ ಅವರಿಗೆ ರಾತ್ರಿವೇಳೆ ಅಭ್ಯಾಸಕ್ಕೆ ಅವಕಾಶ ಕಲ್ಪಿಸಿಕೊಡುತ್ತಿದ್ದ. ಆವಾಗಲೂ ಬೋಧನೆ ಮಾಡುತ್ತಿದ್ದ. ಕೇವಲ 'ಅಕ್ಷರಜಾಣ'ರನ್ನಾಗಿಸುವುದು ಅವನ ಧ್ಯೇಯವಾಗಿರುತ್ತಿರಲಿಲ್ಲ. ಅವನೊಬ್ಬ 'ಮನುಷ್ಯ'ನಾಗಿ ಸಮಾಜದಲ್ಲಿ ಬಾಳುವ ಕಲೆಯನ್ನು ಕಲಿಸುವ ಶಿಲ್ಪಿಯಾಗಿದ್ದ. ಪ್ರಾಥಮಿಕ ಶಾಲೆಯ ಉಪಾಧ್ಯಾಯನೆಂದರೆ 'ಗ್ರಾಮದ ಗುರು'ವೆನ್ನುವಷ್ಟು ಗೌರವಾನ್ವಿತ ಪೂಜ್ಯನೆನಿಸಿದ್ದ. ಅವನ ನುಡಿ-ನಡೆಗಳು 'ಆದರ್ಶ'ವಾಗಿದ್ದವು. ಅವನು ದಾರಿಯಲ್ಲಿ ಬರುತ್ತಿದ್ದರೆ ಕುಳಿತಿದ್ದ ಗಂಡಸರು-ಹೆಂಗಸರು ಎದ್ದು ನಿಲ್ಲುತ್ತಿದ್ದರು. ಕೆಲವರು ಕೈಮುಗಿಯುತ್ತಿದ್ದರು. ಶಿಕ್ಷಕನೂ ಅವರನ್ನು ಬಂಧುಸಮಾನವಾಗಿ ಕಾಣುತ್ತಿದ್ದನು. ಅಪ್ಪ, ಅವ್ವ, ದೊಡ್ಡವ್ವ, ಅಯ್ಯಾ, ಅಣ್ಣಾ ಎಂದೇ ಕರೆಯುತ್ತಿದ್ದನು. ಗ್ರಾಮದಲ್ಲಿ ನ್ಯಾಯ ನಿರ್ಣಯ ಮಾಡುತ್ತಿದ್ದ ನ್ಯಾಯಾಧೀಶನಾಗಿರುತ್ತಿದ್ದನು. ಸಣ್ಣ ಪುಟ್ಟ ಕಾಯಿಲೆಗಳಿಗೆ ಔಷಧಿ ಕೊಡುವ ವೈದ್ಯನೂ ಅವನೇ, ಶುಭ ಶೋಭನ ಮಂಗಳ ಕಾರ್ಯಗಳಿಗೆ ದಿನ-ವಾರ ಸೂಚಿಸುವ ಮಾರ್ಗದರ್ಶಿಯೂ ಅವನೇ ಸರ್ಕಾರಿ ಕಛೇರಿಗಳಿಗೆ ಅರ್ಜಿ ಇತ್ಯಾದಿಗಳನ್ನು ಬರೆದುಕೊಡುವ ಸೇವೆಯೂ ಅವನದೇ. ರೈತನಿಗೆ ಯಾವ ಮಳೆಯಲ್ಲಿ ಯಾವ ಬೀಜ ಬಿತ್ತಬೇಕೆಂಬ ಸಲಹೆ ಕೊಡುವವನೂ ಅವನೇ. ಗ್ರಾಮದ ಜಾತ್ರೆ, ಪರಿಷೆಗಳಲ್ಲಿ ದೇವರ ಉತ್ಸವಗಳನ್ನು ವ್ಯವಸ್ಥಿತವಾಗಿ ಮಾಡಿಸುವಲ್ಲಿ ಅವನ ಸಹಕಾರವಿದ್ದೇ ಇರುತ್ತಿತ್ತು. ಗ್ರಾಮ ಕ್ರೀಡೆಗಳಲ್ಲಿ ಅವನು ಇರದೇ ಆಟ ನಡೆಯುತ್ತಿರಲಿಲ್ಲ. ಕೋಲಾಟದಲ್ಲಿ ಹಾಡುಗಾರನಾದರೆ, ಬಯಲಾಟ, ಯಕ್ಷಗಾನಗಳಲ್ಲಿ ಮುಮ್ಮೇಳಗಾರ, ಭಾಗವತನೂ ಆಗಿರುತ್ತಿದ್ದ. ಊರಿಗೆ ಯಾರಾದರೂ ಸರ್ಕಾರಿ ಅಧಿಕಾರಿಗಳು ಬಂದರೆ ಅವರ ಆತಿಥ್ಯ, ವಸತಿ ಸೌಕರ್ಯಗಳಿಗೂ ನೆರವಾಗುತ್ತಿದ್ದನು. ಗ್ರಾಮಗಳಲ್ಲಿದ್ದ ಮತ-ಮಾನ್ಯಗಳ ಸೇವೆಯಲ್ಲಿ ಆ ಬಗ್ಗೆ ಜನಸಮುದಾಯದಲ್ಲಿ ಭಕ್ತಿಶ್ರದ್ಧೆಗಳು ಹೆಚ್ಚುವಂತೆ ಶ್ರಮಿಸುತ್ತಿದ್ದ. ಪುರಾಣ ಪ್ರವಚನ ಮಾಡುತ್ತ ಸತ್ಪರಂಪರೆಯನ್ನು ಮುಂದುವರಿಸುವಲ್ಲಿ ನಿರತನಾಗಿರುತ್ತಿದ್ದ. ಪ್ರಾಥಮಿಕ ಶಿಕ್ಷಕ ಒಬ್ಬ ಜೀವನಯೋಗಿಯಾಗಿ ಸಮಾಜದಲ್ಲಿ ಕಂಗೊಳಿಸುತ್ತಿದ್ದ.

**ಇಂ**ದಿನ ಶಿಕ್ಷಕ ಈ ಪರಂಪರೆಯನ್ನು ಮುಂದುವರಿಸುವ ಪ್ರಯತ್ನಶೀಲನಾಗುವುದಾದರೆ ಸಭ್ಯ ಸುಸಂಸ್ಕೃತ ಸಮಾಜದ ರೂವಾರಿಯಾಗುವಲ್ಲಿ ಸಂಶಯವಿರದು. ರಾಷ್ಟ್ರ, ಶಿಕ್ಷಕನ – ಅದರಲ್ಲಿಯೂ ಪ್ರಾಥಮಿಕ ಶಿಕ್ಷಕನ ಪವಿತ್ರ ವ್ಯಕ್ತಿತ್ವದ ಮೇಲೆ ರೂಪಿತವಾಗುತ್ತದೆ.

*

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಮುಂದಳ ಮನೆಯಲ್ಲಿ ಚಂದ್ರಶೇಖರನಿದಾನೆ ನೋಡಾ ಅಯ್ಯಾ*
*ಚಂದ್ರಶೇಖರನ ಸ್ನೇಹವ ಮಾಡಲು ಭವ ಬಂಧನ ಹಿಂಗಿತ್ತಯ್ಯ*
*ಜಗವಂದನೆಗೆಯ್ಯಲಾದೆನಯ್ಯಾ*
*ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ.*

ಶರಣನ ಸ್ಥೂಲ ತನುವಿನಲ್ಲಿ ಪರಮಶಾಂತಿ ಸ್ವರೂಪನಾದ ಶ್ರೀಗುರುಕೊಟ್ಟ ದೀಕ್ಷಾತ್ರಯದಿಂದಾಗಿ ಇಷ್ಟಲಿಂಗನೆಂಬ ಚಂದ್ರಶೇಖರ ನಿದ್ದಾನೆ. ಆ ಇಷ್ಟಲಿಂಗರೂಪಿಯಾದ ಚಂದ್ರಶೇಖರನಲ್ಲಿ ಸತ್ಕ್ರಿಯೆ ಸಮ್ಯಕ್‌ಜ್ಞಾನಗಳ ಸಮರಸವಾಗಿ ಬೆರೆತಾಗ ಭವಬಂಧನಗಳೆಲ್ಲ ಪರಿಹಾರವಾಗುತ್ತವೆ. ಅಂತಹ ಚಂದ್ರಶೇಖರನಿರುವ ಶರಣ ಜಗದ್ವಂದ್ಯ ನಾಗಿರುತ್ತಾನೆ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ
ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಾಮೃತದ
ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ –
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

### ಶ್ರೀವಾಣಿ

ಶಿಕ್ಷಕನನ್ನು ಲೋಕ ಸದಾ ನೋಡುತ್ತಿರುತ್ತದೆ. ಅದರಲ್ಲೂ ವಿದ್ಯಾರ್ಥಿ ಲೋಕ ನಿರಂತರ ಕಣ್ಣಿಟ್ಟಿರುತ್ತದೆ. ಅವನ ನುಡಿ-ನಡೆಗಳನ್ನು ಚಲನವಲನಗಳನ್ನು, ಶೀಲ ವ್ಯಸನಗಳನ್ನು ಗಮನಿಸುತ್ತಿರುತ್ತದೆ. ಶಿಕ್ಷಕನ ಪಾಂಡಿತ್ಯ, ಪ್ರತಿಭೆಗಳಿಗಿಂತ ಅವನ ಬದುಕನ್ನು ತೆರೆದ ಕಣ್ಣುಗಳಿಂದ ನೋಡುತ್ತದೆ. ಶಿಕ್ಷಕನ ನಿಜವಾದ ವಿಮರ್ಶಕರು ವಿದ್ಯಾರ್ಥಿಗಳು. ಶಿಕ್ಷಕ ವಿದ್ಯಾರ್ಥಿಯ ಜೀವನದಲ್ಲಿ ಅದ್ಭುತ ಕ್ರಾಂತಿ ಮಾಡಬಲ್ಲ ಮಹಾಶಕ್ತಿ; ಮೃಗವನ್ನು ಮಾನವ ನನ್ನಾಗಿ ಪರಿವರ್ತಿಸುವ ಮಾಂತ್ರಿಕ.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ನಾಮ ಸೀಮೆರಹಿತ ಕಾಲಕರ್ಮರಹಿತ
ನಿಸ್ಸೀಮ ನಿರ್ಮಲ ನಿರುಪಮ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಣ್ಣ ಕತ್ತಲೆ ಕಳೆವ ಮನದ ಮೋಹವ ಬಿಡಿಪ
ತನುವ ಭ್ರಾಂತಿಯ ತೆಗೆ ಘನಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಚ್ಚ ಬರಿಯ ಬೆಳಗೆ ಅಚ್ಚ ಅರಿವಿನ ದೀಪ
ಕುರುಹಿಡಿದು ಬೆರಗೆನಿಸಿ ಚರಿಸುತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೈವಲ್ಯ ಜ್ಯೋತಿಯೆ ಕೈಲಾಸ ತೇಜವೆ
ಸೇವಾ ಕಾಯಕಗೈವ ಶ್ರೀ ಶಿವನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣ ಸಾಹಿತ್ಯದ ಸಾಕಾರ ರೂಪವೆ
ಶರಣ ಸಂಸ್ಕೃತಿಯಾಭರಣವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಶಿ ಲಿಂಗವು ನೀನೆ ಶ್ರೀಶೈಲೇಶನು ನೀನೆ
ಗೋಕರ್ಣ ನಿಜವಾಸಿ ಶಿವಲಿಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಂಜುನಾಥನು ನೀನೆ ನಂದಿನಾಥನು ನೀನೆ
ವಿಶ್ವನಾಥನು ನೀನೆ ನನ್ನ ತಂದೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುವೆ ಎಡೆಯಾಗುವೆ ತವಪಾದ ಪದ್ಮಕೆ
ಪರಮಪಾವನ ಚರಿತ ಚರಣಕೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

''ಆಡಿದೆನಯ್ಯಾ ನೀನಾಡಿಸಿದ ತೆರದಿ
ನುಡಿದೆನಯ್ಯಾ ನೀನುಡಿಸಿದ ತೆರದಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತವತನುವೆ ಶಿವಲಿಂಗ ಮನವೆಲ್ಲ ಘನಲಿಂಗ
ಭಾವಮಹಾಶಿವದ ಜ್ವಲಲಿಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಸಾಮಾಜಿಕ ಕ್ರಾಂತಿ

ಭಾಗ – ೮

– ದೇಜಗೌ
ವಿಶ್ರಾಂತ ಕುಲಪತಿಗಳು,
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಸಮಾಜ ಕಲ್ಯಾಣವೇ ಧಾರ್ಮಿಕ ರಾಜಕೀಯಾರ್ಥಿಕಾದಿ ಸಮಸ್ತ ವ್ಯವಸ್ಥೆಗಳ ಐಕೈಕ ಗುರಿ. ಆ ಎಲ್ಲ ವ್ಯವಸ್ಥೆಗಳನ್ನು ರೂಪಿಸಿ, ಕಾರ್ಯಗತಗೊಳಿಸುವ ಕರ್ತೃವೂ ಸಮಾಜವೇ. ಸಮಾಜದ ಪದಕ್ಕೆ ಸಭೆ, ಸಂಘ, ಪಕ್ಷ, ಗುಂಪುಗಳೆಂಬ ಅರ್ಥಗಳಿವೆ. ನಿರ್ದಿಷ್ಟ ಜೀವನಮಾರ್ಗ ವನ್ನನುಸರಿಸುವ, ಆಂತರಿಕ ವ್ಯವಹಾರವುಳ್ಳ ಹಲವಾರು ವ್ಯಕ್ತಿಗಳ ಸುವ್ಯವಸ್ಥಿತ ಸಮುದಾಯವೇ ಸಮಾಜವೆಂದು ತಜ್ಞರು ವ್ಯಾಖ್ಯಾನಿಸುತ್ತಾರೆ. ಅಂದರೆ ವ್ಯಕ್ತಿಗಳೇ ಸಮಾಜದ ಘಟಕಗಳೆಂದಾಗುತ್ತದೆ. ಅತ್ಯಂತ ಪ್ರಾಚೀನಕಾಲದಲ್ಲಿ 'ಸಮಾಜ'ವಿರಲಿಲ್ಲ. ಪ್ರಾಯಶಃ ಕುಟುಂಬ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಾಗಿನಿಂದ ಸಮಾಜದ ಕಲ್ಪನೆ ಮೂರ್ತತ್ವ ಪಡೆದಿರಬೇಕು. ಕಾಲಾನಂತರದಲ್ಲಿ ಸಮಾಜವೇ ರಾಷ್ಟ್ರಕ್ಕೆ ತಳಹದಿಯಾಗಿರಬೇಕು.

ಒಂದು ಕುಟುಂಬದಲ್ಲಿ ತಂದೆ ತಾಯಿ ಮಗ ಸೊಸೆ ತಮ್ಮ ನಾದಿನಿ ಮೊದಲಾವರಿರುತ್ತಾರಷ್ಟೆ, ಕುಟುಂಬದ ನಿರ್ವಹಣೆಗಾಗಿ, ಅದರ ಭದ್ರತೆ ಮತ್ತು ಏಳ್ಗೆಗಾಗಿ ಅವರು ಕೆಲವು ಕಟ್ಟುಪಾಡುಗಳನ್ನು ರಚಿಸಿಕೊಂಡು ಊಚು ನೀಚುಗಳನ್ನು ಸರಿಪಡಿಸಿಕೊಂಡು ಪರಸ್ಪರ ಅರಿವಿನಿಂದ ಮತ್ತು ಹೊಂದಾಣಿಕೆಯಿಂದ ಕೆಲಸ ಮಾಡಬೇಕಾಗುತ್ತದೆ. ಇದೇ ತತ್ವ ಸಮಾಜಕ್ಕೂ ಅನ್ವಯಿಸುತ್ತದೆ. ಭಿನ್ನ ಭಿನ್ನ ರುಚಿಯ ಮತ್ತು ಮನೋಧರ್ಮದ, ಭಿನ್ನ ಭಿನ್ನ ಧ್ಯೇಯಾಕಾಂಕ್ಷೆಗಳ ಜನರ ನಡುವೆ ಏಕತೆ ಸಾಧಿಸುವುದು ಸುಲಭವಲ್ಲ. ಅದು ವ್ಯವಹಾರವೂ ಅಲ್ಲ, ಅತ್ಯಗತ್ಯವೂ ಅಲ್ಲ. ಅವರೊಳಗೆ ಸಮನ್ವಯ ಸಾಮರಸ್ಯಗಳನ್ನು ಕುದುರಿಸಿದರೆ ಸಾಕು. ಇಂಥ ಕುದುರಿಕೆಗೊಂದು ನೀತಿಸಂಹಿತೆಯ ರಚನೆ ಅತ್ಯಾವಶ್ಯಕ. ಸಾಮಾಜಿಕ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಾಗಿನಿಂದ ಧರ್ಮಶಾಸ್ತ್ರದ ಅಥವಾ ಶಾಸನದ ಹೆಸರಿನಲ್ಲಿ ಅದು ರೂಪಗೊಂಡಿರುವುದುಂಟು; ಅಷ್ಟೇ ಅಲ್ಲ, ಕಾಲ ಬದಲಾಯಿಸಿದಂತೆಲ್ಲ ಅದು ಸಹ ಪರಿವರ್ತನೆಗೊಂಡಿರುವುದುಂಟು.

ನೀತಿಸಂಹಿತೆಯ ವ್ಯವಸ್ಥೆಯಲ್ಲಿ ಯಾವಾಗಲೂ ಬುದ್ಧಿಜೀವಿಗಳದ್ದೆ ಮೇಲುಗೈ ತಾನೆ; ಅದರಲ್ಲಿಯೂ ಸಾಮಾನ್ಯ ಜನ ಅಜ್ಞಾನಾಂಧಕಾರದಲ್ಲಿ ಮುಳುಗಿರುವಾಗ ಅವರು ಮಾಡಿದ್ದೇ ಶಾಸನ. ಅಂದ ಮೇಲೆ ಆ ಶಾಸನ ಬುದ್ಧಿಜೀವಿಗಳ ಹಿತಾಸಕ್ತಿ ರಕ್ಷಣೆಗೆ ಮಾತ್ರ ಸೀಮಿತವಾಗಿರುತ್ತದೆ. ಅದನ್ನೇ ಧರ್ಮದ ಹೆಸರಿನಲ್ಲಿ ಚಾಲುಮಾಡುತ್ತಾರೆ. ಹೀಗಾಗಿ ಧರ್ಮದ ಕಲ್ಪನೆಯೂ ವಿಕಾರಗೊಳ್ಳುತ್ತದೆ. ಆ ವಿಕಾರ ಅತಿರೇಕಕ್ಕೆ ಹೋದಾಗ, ಅಂದರೆ ಧರ್ಮದ ಗ್ಲಾನಿಯೊದಗಿದಾಗ ಸಾಮಾಜಿಕ ವ್ಯವಸ್ಥೆ ಶಿಥಿಲಗೊಳ್ಳುತ್ತದೆ, ನಾನಾ ರೀತಿಯ ರೋಗರುಜಿನಗಳಿಗೆ ಗುರಿಯಾಗಿ ವಿನಾಶದ ದಡವನ್ನು ಮುಟ್ಟುತ್ತದೆ. ಅಂಥ ಸಮಾಜವನ್ನು ಪುನರುಜ್ಜೀವನಗೊಳಿಸಬೇಕಾದರೆ ಕಾಯಕಲ್ಪ ಚಿಕಿತ್ಸೆ, ಶಸ್ತ್ರಚಿಕಿತ್ಸೆಗಳಲ್ಲಿ ಪಾರಂಗತನಾದ ಮಹಾವೈದ್ಯನೇ ಬೇಕು. ಅಲ್ಲಿ ಆಗಬೇಕಾದದ್ದು ಅಲ್ಲಿ ಇಲ್ಲಿ ತೇಪೆಹಾಕುವ ಜೀರ್ಣೋದ್ಧಾರ ಕಾರ್ಯವಲ್ಲ. ನವೀಕರಣ. ಅಂದರೆ ನವ ಸಮಾಜ ಸೃಷ್ಟಿಯೇ ನಡೆಯಬೇಕು. ಅದಕ್ಕೆ ಪೂರ್ವಭಾವಿಯಾಗಿ ಸಮಾಜದ ತಳಹದಿಯಾದ ಧರ್ಮದ ನವೀಕರಣ ಪೂರೈಸಬೇಕು. ಆದ್ದರಿಂದಲೇ ದೂರದೃಷ್ಟಿಯ, ಸೂಕ್ಷ್ಮಮತಿಯ ಮಹಾ ಪ್ರವಾದಿ ಬಸವಣ್ಣನವರು ಮೊದಲು ಧಾರ್ಮಿಕ ಕ್ರಾಂತಿಯ ಕಡೆಗೆ ಗಮನಹರಿಸಿದ್ದು.

ಕೇವಲ ವಿಶ್ಲೇಷಣೆಯು ಸೌಲಭ್ಯಕ್ಕಾಗಿ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿಗಳನ್ನು ಪ್ರತ್ಯೇಕವಾಗಿ ಪರಿಗಣನೆಗೆ ತೆಗೆದುಕೊಳ್ಳವು ದಾದರೂ, ಅವೆರಡೂ ಅನ್ಯೋನ್ಯಾಶ್ರಯಿಗಳು ಹಾಗೂ ಪರಸ್ಪರ ಚೋದಕಗಳೆಂದು ತಿಳಿಯಬಹುದು. ಲಿಂಗಧಾರಣೆಯಾಗಲೀ ಅಷ್ಟಾವರಣಗಳ ಕಲ್ಪನೆಯಾಗಲೀ ಆಧ್ಯಾತ್ಮ ಸಾಧನೆಯ ದೃಷ್ಟಿಯಿಂದ ಅತ್ಯಗತ್ಯವಾಗಿ, ಮೂಲತಃ ಧಾರ್ಮಿಕೋದ್ದೇಶವುಳ್ಳವುವಾದರೂ, ನಾನಾ ಕುಲಗಳನ್ನು ಒಂದುಗೂಡಿಸಿ, ಸಾಮಾಜಿಕ ಭದ್ರತೆಯನ್ನು ರಕ್ಷಿಸುವ ದೃಷ್ಟಿಯಿಂದ ಅನಿವಾರ್ಯವೆಂದೇ ತೋರದಿರಲಾರವು. ಅಂತೆಯೇ ಅಸ್ಪೃಶ್ಯತಾ ನಿರ್ಮೂಲನ ಮತ್ತು ಸ್ತ್ರೀ ಸ್ವಾತಂತ್ರ್ಯ ರಕ್ಷಣೆ ಮೂಲತಃ ಸಾಮಾಜಿಕ ಹೊಣೆಗಾರಿಕೆಯಾದರೂ, ಅವನ್ನು ಅಧ್ಯಾತ್ಮ ಕ್ಷೇತ್ರದ ಪರಿಧಿಯ ಹೊರಗಿರಿಸುವ ಪ್ರಯತ್ನ ಧರ್ಮಬಾಹಿರವಾದುದು. ತಾರತಮ್ಯ ತತ್ವ ಸದ್ಧರ್ಮ ಲಕ್ಷಣವಲ್ಲವೆಂಬುದಂತು ಸತ್ಯಸ್ಯ ಸತ್ಯ. ಆದ್ದರಿಂದ ಬಸವಣ್ಣನವರು ಪ್ರಾರಂಭಿಸಿದ ಆ ಎರಡು ಕ್ರಾಂತಿಗಳೂ ಜತೆಜತೆಯಾಗಿಯೇ ಮುಂದುವರಿದುವೆನ್ನಬೇಕಾಗಿದೆ. ಯಾವ ಕ್ರಾಂತಿಯೇ ಆಗಲೀ ಮಾನವ ಕಲ್ಯಾಣವೇ ಅದರ ಗುರಿಯೆನ್ನುವುದನ್ನು ಮಾತ್ರ ಮರೆಯಲಾಗದು.

ಅಸ್ಪೃಶ್ಯತಾ ನಿರ್ಮೂಲನವೆ ಆಧಾರವಾಗುಳ್ಳ ಜಾತಿ ವಿನಾಶ, ಸ್ತ್ರೀ ಸ್ವಾತಂತ್ರ್ಯ ರಕ್ಷಣೆ, ಕಾಯಕ ತತ್ವದ ಪ್ರತಿಷ್ಠಾಪನೆ ಮತ್ತು ವರ್ಗ ವರ್ಣರಹಿತವಾದ ಸಾಮಾಜಿಕ ಸ್ಥಿರೀಕರಣ ಮತ್ತು ವಿಚಾರ ಸ್ವಾತಂತ್ರ್ಯದ ಸರ್ವಸಮಾನತೆಯ ಪ್ರತಿಪಾದನೆ – ಇವು ಬಸವಣ್ಣನವರ ಸಾಮಾಜಿಕ ಕ್ರಾಂತಿಯ ಪಂಚಮುಖಿಗಳು.

ಅಸ್ಪೃಶ್ಯತೆ ಹಿಂದೂ ಧರ್ಮಕ್ಕೆ ತಗುಲಿರುವ ರೋಗವೆಂದು ಸ್ವಾಮಿ ವಿವೇಕಾನಂದರೂ, ಅದೊಂದು ಅಭಿಶಾಪವೆಂದು ಮಹಾತ್ಮ ಗಾಂಧಿಯವರೂ, ಮಹಾಪಾಪವೆಂದು ಮಹಾ ಮೇಧಾವಿ ಡಾಕ್ಟರ್

ಅಂಬೇಡ್ಕರರೂ ಘಂಟಾಘೋಷವಾಗಿ ಸಾರಿದ್ದಾರೆ. ಅದರಿಂದಾಗಿ ಸವರ್ಣೀಯರೆಲ್ಲ ತಲೆತಗ್ಗಿಸಬೇಕಾಗಿದೆಯೆಂದು ಅವರು ಘೋಷಿಸಿದ್ದಾರೆ. 'ಆತ್ಮವತ್ ಸರ್ವ ಭೂತೇಷು' ಎಂಬ ತತ್ವ ಪುಸ್ತಕದಲ್ಲುಳಿದಿದೆಯೇ ಹೊರತು ಆಚರಣೆಯಲ್ಲಿಲ್ಲ. ಅಸ್ಪೃಶ್ಯತೆಯ ಬಗ್ಗೆ ಪ್ರಸ್ತಾಪಿಸುತ್ತ ಸ್ವಾಮಿ ವಿವೇಕಾನಂದರು 'ಈ ನಾಡಿನ ಜನ ಹೃದಯದಲ್ಲಿ ದಯೆಯಿದೆಯೆ? ಅನುಕಂಪೆಯಿದೆಯೆ? ನಿಮ್ನ ವರ್ಗದ ಜನ ಹಗಲಿರುಳೆಲ್ಲ ದುಡಿದರೂ ಹೊಟ್ಟೆಗೆ ಕೂಳಿಲ್ಲ; ಮೈಗೆ ಚಿಂದಿಯಿಲ್ಲ, ಅವರು ಉದ್ಧಾರವಾಗುವ ತನಕ ನಾಡಿನ ಕಲ್ಯಾಣ ಸಾಧ್ಯವಿಲ್ಲ' ಎಂದು ನುಡಿದಿದ್ದಾರೆ. ತಮಗೆ ಪೂರ್ವಜನ್ಮವಿರುವುದಾದರೆ ಪರೆಯನಾಗಿ ಹುಟ್ಟುವ ಬಯಕೆಯನ್ನು ಗಾಂಧೀಜಿ ವ್ಯಕ್ತಪಡಿಸಿದ್ದುಂಟು. ಬುದ್ಧ ರಾಮಾನುಜರೂ ಆ ವ್ರಣ ನಿವಾರಣೆಯ ಬಗ್ಗೆ ಪ್ರಯತ್ನ ನಡೆಸಿದ್ದುಂಟು. ಆದರೆ ಬಸವಣ್ಣನವರಂತೆ ಆ ನತದೃಷ್ಟರಿಗಾಗಿ ಮರುಗಿದ್ದ, ಕೊರಗಿದ್ದ, ಕಳವಳಿಸಿದ, ಹಂಬಲಿಸಿದ, ಶ್ರಮಿಸಿದ, ತಮ್ಮ ಆತ್ಮ ಶ್ರೇಯಸ್ಸನ್ನೇ ತ್ಯಾಗಮಾಡಿದ, ತಮ್ಮ ಪ್ರಾಣವನ್ನೇ ಪಣವಾಗೊಡ್ಡಿದ ಹುತಾತ್ಮರು, ದಲಿತೋದ್ಧಾರಕ ಎಂಬ ಬಿರುದಿಗೆ ಪಾತ್ರರಾದ ಮತ್ತೊಬ್ಬರು ಅಂದಿನಿಂದ ಇಂದಿನವರೆಗೆ ಭರತಖಂಡದಲ್ಲಿ ಜನಿಸಲಿಲ್ಲವೆಂದೇ ಹೇಳಬಹುದು, ಪ್ರಾಯಶಃ ಅಂಬೇಡ್ಕರ್ ಹೊರತಾಗಿ.

ಬಸವಣ್ಣನವರು ಸಿದ್ಧಾಂತ ಲೋಲುಪರಲ್ಲ, ನಿಷ್ಠಿಟ ಅನುಷ್ಠಾನಶೀಲರು. ಸೋಗು ಬೂಟಾಟಿಕೆಗಳಿಗೂ ಅವರಿಗೂ ಬಲು ದೂರ. ಸರ್ವಸಮಾನತೆ ಹಾಗೂ ಭ್ರಾತೃತ್ವದ ಆಧಾರದ ಮೇಲೆ, ಅಸ್ಪೃಶ್ಯರಿಗೆ ಸಮಾಜದಲ್ಲಿ ಸ್ಥಾನ ಕಲ್ಪಿಸದಿದ್ದರೆ, ಆಧ್ಯಾತ್ಮ ಸಾಧನೆಗೆ ಅವಕಾಶ ನೀಡದಿದ್ದರೆ, ದೇಶದ ಆಗುಹೋಗುಗಳಲ್ಲಿ ಪಾಲ್ಗೊಳ್ಳುವ ಸದುವು ಅವರಿಗೆ ದೊರೆಯದಿದ್ದರೆ, ರಾಷ್ಟ್ರೈಕ್ಯ ಸಾಧನೆ ಒತ್ತಟ್ಟಿಗಿರಲಿ, ರಾಷ್ಟ್ರವಿನಾಶವನ್ನು ಸಹ ತಡೆಗಟ್ಟಲಾಗದು; ಅಸ್ಪೃಶ್ಯತೆ ರಾಷ್ಟ್ರಪತನದ ಹಾಗೂ ಚಾರಿತ್ರ್ಯಹೀನತೆಯ ಕುರುಹು; ಅದು ಚಾಲ್ತಿಯಲ್ಲಿರುವ ತನಕ ಸಮಾಜದಲ್ಲಿ ಶಾಂತಿ ನೆಲಸಲಾಗದು, ದೇಶ ಯಾವಾಗಲೂ ಕ್ಷೋಭೆಯ ಸಿಡಿಮದ್ದಿನ ಮೇಲೆ ನಿಂತಂತಿರುತ್ತದೆ ಎಂಬ ಸತ್ಯ ಅವರ ಕಣ್ಣಿಗೆ ಕಟ್ಟಿದಂತಿದೆ. ಇಂದಿನವರಂತೆ ಅವರು ಅಧಿಕಾರಲಾಲಸೆಗಾಗಿ, ಆನುವಂಶಿಕ ಸಾಮ್ರಾಜ್ಯ ಸ್ಥಾಪನೆಗಾಗಿ ಅಸ್ಪೃಶ್ಯೋದ್ಧಾರದ ರಾಜಕೀಯ ನಾಟಕವನ್ನಾಡಿದವರಲ್ಲ. ದೇಶಕಲ್ಯಾಣ ಮತ್ತು ಮಾನವತಾ ದೃಷ್ಟಿ ಅವರ ಕಾರ್ಯಕ್ರಮದ ಉದ್ದೇಶವಾಗಿದೆಯಲ್ಲದೆ, ಅವರ ಧಾರ್ಮಿಕ ಜೀವನದ ಮತ್ತು ಆಧ್ಯಾತ್ಮ ಸಾಧನೆಯ ಅವಿಭಾಜ್ಯಾಂಗವಾಗಿದೆಯೆನ್ನುವುದನ್ನು ಮರೆಯಲಾಗದು. ಅಸ್ಪೃಶ್ಯರನ್ನು ಕುರಿತು ಅವರ ಮಾತುಗಳು ಮರುಕ ಕರುಣೆಗಳು ಕೊಳಗೊಂಡ ಹೃದಯದ ಆಳದಿಂದ ಬಂದುವೇ ಹೊರತು, ಅದರ ಸಹಾನುಭೂತಿಗಾಗಿ, ಹಗರಣದ ಚೋಹಕ್ಕಾಗಿ ಆಡಿದುವಲ್ಲ. ಬುದ್ಧಿ ಭಾವಗಳ ಸಂಪತ್ತಾಗಲೀ, ದೈವೀ ಭಾವನೆಯಾಗಲಿ ಯಾವೊಂದು ವರ್ಗದ ಮೀಸಲು ಚೆಪ್ಪೋಡಲ್ಲವೆನ್ನುವುದನ್ನು ರುಜುವಾತು ಮಾಡಿ ತೋರಿಸಿದ ಮಹಾನುಭಾವರವರು.

'ಹೊಲೆಯ ಹೊಲಬಿಗನಾದರೆ, ಅವನ ಹೊರೆಯಲಿಪ್ಪುದು ಲೇಸು ಕಂಡಯ್ಯ;' 'ಶ್ವಪಚನಾದರೇನು ಲಿಂಗವಿದ್ದವನೇ ವಾರಣಾಸಿ', ಅವನೇ ಕುಲಜ, 'ಕೊಲುವನೇ ಮಾದಿಗ, ಹೊಲಸ ತಿಂಬವನೇ ಹೊಲೆಯ'. 'ಡೋಹಾರನೆಂದೆಂಬೆನೆ ಕಕ್ಕಯ್ಯನ? ಮಾದಾರನೆಂದೆಂಬೆನೆ ಚೆನ್ನಯ್ಯನ?' ಚೆನ್ನಯ್ಯನೆಮ್ಮಯ್ಯನು ಚೆನ್ನಯ್ಯನ ಮಗ ನಾನು', 'ಕಕ್ಕಯ್ಯ ಹಿರಿಯಯ್ಯ, ಚಿಕ್ಕಯ್ಯ ಚೆನ್ನಯ್ಯ ಎತ್ತಿ ಮುದ್ದಾಡಿ ಸಲಹಿದರೆನ್ನ'; 'ಹಿರಿಯಯ್ಯ ಶ್ವಪಚಯ್ಯ, ಕಿರಿಯಯ್ಯ ಡೋಹಾರ ಕಕ್ಕಯ್ಯ, ಅಯ್ಯಗಳಯ್ಯನು ನಮ್ಮ ಮಾದಾರ ಚೆನ್ನಯ್ಯನು' 'ಗೋತ್ರ ಮಾದಾರ ಚೆನ್ನಯ್ಯ' - ಇವು ಚಿತ್ತ ಶುದ್ಧಿಯ ಆತ್ಮಭಾವದಿಂದ ಹೊರಹೊಮ್ಮಿದ ಉದ್ಗಾರಗಳು. ಚೆನ್ನಯ್ಯನಂಥ ಹಿರಿಯ ಶರಣನಲ್ಲಿ ಅವರಿಗಿರುವ ಭಕ್ತಿಗೌರವ ವಾತ್ಸಲ್ಯಗಳು ಅನ್ಯಾದೃಶವಾದುವು. ಅವರ ದೃಷ್ಟಿಯಲ್ಲಿ ಅವನು ಶಿವನಿಗಿಂತ ಒಂದು ಕೈ ಮಿಗಿಲು. ಕೂಡಲಸಂಗಯ್ಯ ಅವನಿಂದ ಅಂಬಲಿಯ ಪ್ರಸಾದ ಪಡೆದದ್ದರಿಂದ ವೇದ ನಡನಡ ನಡುಗಿತಂತೆ, ತರ್ಕ ತರ್ಕಿಸಲರಿಯದೆ ಮಗುವಡೆದಿತ್ತಂತೆ, ಆದ್ದರಿಂದಲೇ ಅವರು

*ನಡೆ ಚೆನ್ನ, ನುಡಿ ಚೆನ್ನ, ಎಲ್ಲಿ ನೋಡಿದಡೆ ಚೆನ್ನ!*
*ಪ್ರಮಥರೊಳಗೆ ಚೆನ್ನ, ಪುರಾತನರೊಳಗೆ ಚೆನ್ನ!*
*ಸವಿನೋಡಿ ಅಂಬಲಿಯ, ರುಚಿಯಾಯಿತ್ತೆಂದು,*
*ಕೂಡಲ ಸಂಗಮದೇವರಿಗೆ ಬೇಕೆಂದು ಕೈದೆಗೆದ ನಮ್ಮ ಚೆನ್ನ*

ಎಂದು ಅನನ್ಯ ಭಕ್ತಿಭಾವದಿಂದ ಸ್ತುತಿಸುತ್ತಾರೆ; 'ಮಾದಾರ ಚೆನ್ನಯ್ಯನ ಮನೆಯ ಮಗ ನಾನಯ್ಯ', 'ಕುಲಕ್ಕೆ ತಿಲಕ ನಮ್ಮ ಮಾದಾರ ಚೆನ್ನಯ್ಯ' ಎಂದು ನಿರ್ವಂಚನೆಯಿಂದ ಕೊಂಡು ಕೊನೆಯುತ್ತಾರೆ.

ಹಾರುವ ಜಾತಿಯಲ್ಲಿ ಹುಟ್ಟಿದ ತಪ್ಪಿದಾಗಿ ತಮ್ಮನ್ನು ತಾವೇ ಹಂಗಿಸಿಕೊಳ್ಳುವ ನೆವದಿಂದ ಬಸವಣ್ಣನವರು ಆ ಜಾತಿಯ ಜನ ಸಮಾಜಕ್ಕೆ, ನಾಡಿಗೆ ಹಾಗೂ ದೇವರಿಗೆ ಎಸಗಿದ ಅಪಚಾರವನ್ನು ಮಾರ್ಮಿಕವಾಗಿ ಬಯಲಿಗೆಳೆಯುತ್ತಾರೆ; ಅವರ ದೋಷ ದೌಷ್ಟ್ಯಗಳ ಹೊಣೆಗಾರಿಕೆಯನ್ನೆಲ್ಲ ತಾವೇ ಹೊತ್ತುಕೊಂಡವರಂತೆ, ಓದಿದವರ ಕಣ್ಣಲ್ಲಿ ನೀರೊಸರುವಂತೆ, ದೈನ್ಯದಿಂದ ದೈಯೆನ್ನುತ್ತಾರೆ. 'ಕಷ್ಟಜಾತಿಯ ಜನ್ಮದಲ್ಲಿ ಜನಿಸಿದೆ. ಎನಗಿದು ವಿಧಿಯೆ!' 'ಉತ್ತಮ ಕುಲದಲ್ಲಿ ಹುಟ್ಟಿದನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯ' 'ಆನು ಹಾರುವನೆಂದರೆ ಕೂಡಲ ಸಂಗಯ್ಯ ನಗುವನಯ್ಯ' ಎಂದು ಬಗೆಬಗೆಯಾಗಿ ಹಲುಬುತ್ತಾರೆ, ಹಾಗೆ ಹುಟ್ಟಿದ್ದೇ ಒಂದು ಪ್ರಾರಬ್ಧಕರ್ಮ ಹುಟ್ಟನ್ನು ಮರೆಯಲು ಪ್ರಯತ್ನಿಸಿದಷ್ಟೂ ಅದರ ನೆನಹು ಬೊಬ್ಬೆಹಾಕುತಿದ್ದಿರಬೇಕು. ಸಾಧ್ಯವಾದರೆ ಜನ್ಮ ಕುಂಡಲಿಯನ್ನೇ ಬದಲಾಯಿಸಬಾರದೇಕೆ?

*ಚೆನ್ನಯ್ಯನ ಮನೆಯ ದಾಸಿಯ ಮಗನು*
*ಕಕ್ಕಯ್ಯನ ಮನೆಯ ದಾಸಿಯ ಮಗಳು*
*ಇವರಿಬ್ಬರು ಹೊಲದಲ್ಲಿ ಬೆರಣಿಗೆ ಹೋಗಿ ಸಂಗವ ಮಾಡಿದರು;*
*ಇವರಿಬ್ಬರಿಗೆ ಹುಟ್ಟಿದ ಮಗ ನಾನು,*
*ಕೂಡಲ ಸಂಗಮದೇವ ಸಾಕ್ಷಿಯಾಗಿ.*

ಎಂಥ ಭಯಂಕರವಾದ ನಿವೇದನೆ? ಘೋರತಮವಾದ ಪ್ರಾಯಶ್ಚಿತ್ತ? ತಮ್ಮವರೆಸಗಿದ ಪಾಪದ ನಂಜನ್ನೆಲ್ಲ ಈ ರೀತಿ ಮೊಗೆ ಮೊಗೆದು ಈಂಟಿದ





ಆಚಾರ್ಯ ಸಂತರು ಜಗತ್ತಿನಲ್ಲಿ ಅತಿ ವಿರಳ; ಇಲ್ಲವೆಂದರೂ ತಪ್ಪಾಗದು. ಈ ವಾಕ್ಯವನ್ನೋದಿದಂತೆಲ್ಲ ಬಸವಣ್ಣನವರು ಉನ್ನತವಾಗಿ ಬೆಳೆಬೆಳೆದು, ಅವರ ಮಕುಟ ಆಕಾಶದಲ್ಲಿ ಲಯವಾಗಿ ದೃಷ್ಟಿಗೆ ದುರ್ಗಮಯವಾಗುತ್ತದೆ. 'ವಿಪ್ರ ಕರ್ಮವ ಬಿಡಿಸಿ ಅಶುದ್ಧನ ಮಾಡಿದನಾಗಿ' ಅವರು ಸಂಗಯ್ಯನಿಗೆ ಆರತಿಯೆತ್ತುತ್ತಾರೆ.

ವಾಸ್ತವವಾಗಿ ನೋಡಿದರೆ ಹುಟ್ಟಿನಿಂದ ಯಾರೂ ಹೊಲೆಯರಲ್ಲ, ಯಾರೂ ಹಾರುವರಲ್ಲ, ಎಲ್ಲರೂ ವಿಶ್ವಮಾನವರೆ, ಅವರು ದೈಹಿಕವಾಗಿ ಬೆಳೆಬೆಳೆಯುತ್ತ ಪರಿಸರದ ಪ್ರಭಾವದಿಂದ ಹೊಲೆಯರೊ ಹಾರುವರೊ ಆಗಿರುತ್ತಾರೆ. ಹಾರುವರ ಹೊಟ್ಟೆಯಲ್ಲಿ ಹುಟ್ಟಿದವರೆಲ್ಲ ಹಾರುವರಲ್ಲ; ಅಂತೆಯೇ ಹೊಲೆಯರು. ಉತ್ತಮನಾದ ಹೊಲೆಯನಿಗೆ ಮಾತ್ರವಲ್ಲ, ಆತನ ಸೊಣಗನಿಗೂ ಗೌರವ ಸಲ್ಲಿಸಲು ಬಸವಣ್ಣನವರು ಸಿದ್ಧ.

*ಹೊಲೆಯ ಮಾದಿಗ ಭಕ್ತನಾದರೆ*
*ಆತನ ಮನೆಯ ಸೊಣಗಂಗೆ*
*ಪಂಚಮಹಾವಾದ್ಯದಲ್ಲಿ ಸನ್ಮಾನವ ಮಾಡನೆ?*
*ನೆಲನನುಗ್ಘಡಿಪೆ 'ಉಘೇ, ಚಾಂಗುಭಲರೇ, ಎಂದು!*
*ಕುಲದಲಧಿಕ ಹಾರುವಂಗೆ ಸಿದ್ಧಿಗೆಯ್ಯೆಸಲೆ!*
*ನಿಮ್ಮ ಶರಣರ ಮಹಿಮೆ ಘನಕ್ಕೆ ಘನ!*
*ಎಲೆ ಕೂಡಲ ಸಂಗಮದೇವಾ, ನಿಮ್ಮ ನಂಬದವ ಹೊಲೆಯ!*

ಸಜ್ಜನನಿಗೆ, ಸತ್ಕರ್ಮಿಗೆ, ಸದಾಚಾರಿಗೆ ಮನ್ನಣೆ ನೀಡುವಲ್ಲಿ ಅವರು ಸದಾ ಮುಂದು. ಒಂದು ಸಂಪಗೆಯ ಅಥವಾ ಮಲ್ಲಿಗೆಯ ಹೂವಿಂದ ಕಾಡೆಲ್ಲ ಗಮಗಮಿಸುವಂತೆ, ಒಬ್ಬ ಭಕ್ತನ ಪ್ರಭಾವದಿಂದ ಪರಿಸರವೆಲ್ಲ ಶಿವಾನಂದದಲ್ಲಿ ಓಲಾಡುತ್ತದೆ. ಅವರ ಪ್ರಕಾರ ಶಿವನನ್ನು ನಂಬದವ ಹೊಲೆಯ. ಕೇವಲ ಭಾವನೆಯ ಆವಿಯಾಗುಳಿಯದೆ, ಕ್ರಿಯೆಯ ರೂಪದಲ್ಲಿ ಮೂರ್ತತ್ವ ಪಡೆದ ಶಕ್ತಿಯಾದಾಗಲೇ ನಂಬಿಕೆಗೆ ಮಾನ್ಯತೆ. ನಿಷ್ಠೆಯೆನ್ನುವುದೂ ಅಷ್ಟೆ, ಸತ್ಯನ್ಯಾಯಗಳೂ ಅಷ್ಟೇ. ಸಂಗ ಮಹಿಮೆಯಿಂದ ಶಿವಶರಣನ ಮನೆಯ ನಾಯಿಗೂ ಬೆಲೆ ಬರುತ್ತದೆ.

ಬಸವಣ್ಣನವರು ಅಸ್ಪೃಶ್ಯೋದ್ಧಾರ ಕಾರ್ಯವನ್ನು ಚಳುವಳಿಯ ರೂಪದಲ್ಲಿಯೇ ಪೂರೈಸಿರಬೇಕೆಂದು ತೋರುತ್ತದೆ. ಕಂಬಳಿ ನಾಗಿದೇವ ಮತ್ತು ಹರಳಯ್ಯ ಮಧುವರಸರ ಪ್ರಕರಣಗಳು ದಯಾಮಯನಾದ ಕಾಲಪುರುಷ ನಮಗಾಗಿ ಉಳಿಸಿಕೊಟ್ಟಿರುವ ಎರಡು ನಿದರ್ಶನಗಳು. ಇಂಥ ಘಟನೆಗಳು ಇನ್ನೂ ಅನೇಕ ನಡೆದಿರಬೇಕು. ಅವು ವಿಸ್ಮೃತಿಯ ಗರ್ಭದಲ್ಲಿ ಹೂತುಹೋಗಿರಬೇಕು, ಇಲ್ಲವೆ ಅವುಗಳನ್ನು ಆಗದವರು ಚಿಗುರಿನಲ್ಲಿಯೇ ಚಿವುಟಿರಬೇಕು. 'ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ' ಎನ್ನುವ ಅವರ ಹೊನ್ನುಡಿ ಎಲ್ಲ ಕಾಲಕ್ಕೂ ಎಲ್ಲ ದೇಶಗಳಿಗೂ ಭೇದಾತೀತವಾಗಿ ನಿಲ್ಲುವ ವಿಶ್ವ ಸತ್ಯ.

ಅಸ್ಪೃಶ್ಯತಾ ನಿರ್ಮೂಲನ ಮತ್ತು ಜಾತಿವಿನಾಶವೆರಡು ಸಂಗತಿಗಳೂ ಪರಸ್ಪರ ಪ್ರತ್ಯೇಕವಲ್ಲ. ಅವರೆರಡಲ್ಲೊಂದು ಕೈಗೂಡಿದರೂ ಮತ್ತೊಂದು ತಾನೇ ತಾನಾಗಿ ಸಿದ್ಧಿಸುತ್ತದೆ. ಅಸ್ಪೃಶ್ಯತೆ ಭಯಂಕರ ಶಾಪವಾದದ್ದರಿಂದ, ಅದು ಹರಿದರೆ ಉಳಿದ ಸಮಸ್ಯೆಗಳು ತಾವಾಗಿಯೆ ಬಗೆಹರಿಯಬಹುದಾದ್ದರಿಂದ ಬಸವಣ್ಣನವರು ಆ ಬಗ್ಗೆ ವಿಶೇಷ ಗಮನಹರಿಸುತ್ತಾರೆ. ಜಾತಿವಿನಾಶವೇ ಸಮಾಜಾಭಿವೃದ್ಧಿಗೆ ಹಾಗೂ ಅಧ್ಯಾತ್ಮ ಸಿದ್ಧಿಗೆ ಪ್ರಥಮ ಸೋಪಾನವೆಂದು ಎಂಟು ಶತಮಾನಗಳ ಹಿಂದೆಯೇ ಅರಿತುಕೊಂಡದ್ದು ಅವರ ಪ್ರವಾದಿತನಕ್ಕೆ ಸಾಕ್ಷಿಯಾಗಿದೆ. ಜಾತಿ ಕುಲ ನಿರ್ಮಾಣವಾದದ್ದು ಹೇಗೆ? ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ; ವೇದವನೋದಿ ಹಾರುವನಾದ. ಅಂತೆಯೇ ಅಡುಗೆ ಮಾಡಿ ಬಾಣಸಿಗನಾದ, ಇತ್ಯಾದಿ ಇದು ಸರಿಯೆ? ಬಸವಣ್ಣನವರ ಪ್ರಕಾರ ಎರಡೇ ಕುಲ; ಭವಿ, ಭಕ್ತ; ಲಿಂಗಭೇದವಿಲ್ಲ; ವರ್ಣವರ್ಗಗಳಿಲ್ಲ.

*ವ್ಯಾಸ ಬೋಯಿತಿಯ ಮಗ; ಮಾರ್ಕಂಡೇಯ ಮಾತಂಗಿಯ ಮಗ,*
*ಮಂಡೋದರಿ ಕಪ್ಪೆಯ ಮಗಳು!*
*ಕುಲವರಸದಿರಿಂ ಭೋ, ಕುಲದಿಂದ ಮುನ್ನೇನಾದಿರಿಂ ಭೋ*

ಎಂದವರು ಪ್ರಶ್ನಿಸುತ್ತಾರೆ. 'ವರ್ಣಾನಾಂ ಬ್ರಾಹ್ಮಣೋ ಗುರು' ಎಂಬುದು ಹುಸಿ; 'ವರ್ಣಾನಾಂ ಗುರು ನಮ್ಮ ಕೂಡಲ ಸಂಗನ ಶರಣರು' 'ನಿಜವಾದ ಲಕ್ಷ್ಮಿ, ಸರಸ್ವತಿವೊಲಿದರೆ ಕುಲವನರಸಲಿದೇಕೆ? ಆ ದೇವನೊಲಿದ ಭಕ್ತಂಗೆ ಇನ್ನಾವ ಮಂತ್ರವೇಕೆಯೊ?' ಎಂಬ ಪ್ರಶ್ನೆಗೆ ವೇದಾಧ್ಯಯಿಗಳು ಉತ್ತರ ಹೇಳುವುದು ಕಷ್ಟ, ಲಿಂಗಾರಾಧನೆಯಿಂದ ಸಕಲ ವರ್ಣಗಳು ಮರೆಸಿ ಹೋಗುತ್ತವೆಂಬ ದೃಢನಿಲವುಳ್ಳ ಅವರು 'ಕುಲವನರಸುವರೆ ಶರಣನಲ್ಲಿ ಜಾತಿ ಸಂಕರನಾದ ಬಳಿಕ?' ಎಂದು ವಾಗ್ಬಾಣ ಹರಿಸುತ್ತಾರೆ. ಭಕ್ತರಕುಲವನರಸಿದರೆ ತಲೆ ದಂಡವೆಂದು ಶಪಥಗೈಯುತ್ತಾರೆ.

*ವಿಪ್ರ ಮೊದಲು ಅಂತ್ಯಜ ಕಡೆಯಾಗಿ*
*ಶಿವಭಕ್ತರಾದವರನೆಲ್ಲರನೊಂದೆ ಎಂಬೆ;*
*ಹಾರುವ ಮೊದಲು ಶ್ವಪಚ ಕಡೆಯಾಗಿ*
*ಭವಿಯಾದವರನೊಂದೇ ಎಂಬೆ;*
*ಈ ಹೀಗೆಂದು ನಂಬುವುದೆನ್ನ ಮನವು.*
*ಈ ನುಡಿದ ನುಡಿಯೊಳಗೆ ಎಳ್ಳಮೊನೆಯಷ್ಟು ಸಂದೇಹವುಳ್ಳಡೆ,*
*ಹಲುದೋರಿ ಮೂಗ ಕೊಯಿ, ಕೂಡಲ ಸಂಗಮದೇವಾ.*

ಇದು ಅವರ ಪ್ರಾಮಾಣಿಕ ಪ್ರಾರ್ಥನೆ. ಆದರೆ ರಂಧ್ರಾನ್ವೇಷಕರು ಇಂಥ ವಚನಗಳಲ್ಲಿ ಮತಾಂತರ ಪ್ರಯತ್ನದ ಹೊಳಹನ್ನು ಕಾಣಬಯಸಿದರೆ ತಪ್ಪಾದೀತೆಂದೇ ಹೇಳಬೇಕಾಗುತ್ತದೆ. ಇತರ ಮತಗಳ ಸಂಕುಚಿತ ದೃಷ್ಟಿಯಿಂದಾಗಿ, ಅವು ಜಾತಿ ವರ್ಣಗಳನ್ನು ಪುರಸ್ಕರಿಸುತ್ತಿರಲಾಗಿ, ಅವುಗಳಿಂದ ಸಮಷ್ಟಿಚೇತನದ ಉದ್ಬೋಧವಾಗಲೀ, ಊರ್ಧ್ವಮುಖ ಸಂಚಲನೆಯಾಗಲೀ ಸಾಧ್ಯವಿಲ್ಲವೆಂಬ ಅವರ ತಿಳುವಳಿಕೆಯಲ್ಲಿ ಹುಸಿಯಿಲ್ಲ, ಜೀರ್ಣವಸ್ತ್ರಗಳಂತೆ ಹಳಸಲು ತಿಂಡಿಗಳಂತೆ ಜೀರ್ಣತತ್ವಗಳೂ ಬಿಸಾಟಕ್ಕೆ ಯೋಗ್ಯವಾಗಿರುತ್ತವೆ. ಅಂದಿನ ನೂತನ ಮತಾವಿರ್ಭಾವದ ಹಿನ್ನೆಲೆಯಲ್ಲಿ, ಅದು ತನ್ನ ಮುಂದಿರಿಸಿಕೊಂಡ ಧ್ಯೇಯೋದ್ದೇಶಗಳ ಸಫಲತೆಯ ದೃಷ್ಟಿಯಿಂದ ಅಪ್ಪಾವರಣಗಳ ಆವಶ್ಯಕತೆಯನ್ನೂ ಇತಿಮಿತಿಗಳನ್ನೂ, ಕಟ್ಟುಪಾಡುಗಳನ್ನೂ ಗಮನಿಸಬೇಕಾಗುತ್ತದೆ.

*(ಮುಂದುವರಿಯುತ್ತದೆ)* ★

# ನರಕದ ದ್ವಾರ (೨) ಕ್ರೋಧ

- ಎಂ. ಮಾಧವ ಪೈ
"ಶ್ರೀನಿವಾಸ", ಡಿ.ವಿ.ಎಸ್. ಹೈಸ್ಕೂಲ್ ಸಮೀಪ,
ಮೊದಲನೇ ಹಂತ, ವಿನೋಬ ನಗರ,
ಶಿವಮೊಗ್ಗ.

ಈ ಲೋಕದಲ್ಲಿ ಮಾನವರ ಸೃಷ್ಟಿ ಎರಡು ರೀತಿಯಲ್ಲಿದೆ. ಒಂದು ದೈವೀ ಸ್ವಭಾವದ್ದು, ಇನ್ನೊಂದು ದಾನವ ಸ್ವಭಾವದ್ದು. ದಾನವ ಪ್ರವೃತ್ತಿಯವರಾಗಿ ಜನಿಸಿದ ನರರ ಸ್ವಭಾವ ಗುಣಗಳಲ್ಲಿ ಒಂದು ಕ್ರೋಧವೆಂಬುದು. ಈ ಕ್ರೋಧವೆಂಬುದು ನರಕದ ದ್ವಾರ ಎಂದು ಗೀತೆಯಲ್ಲಿ ಹೇಳಿದುದನ್ನು ಈ ಹಿಂದೆಯೇ ತಿಳಿಸಿದೆ. ಈ ದ್ವಾರವನ್ನು ಪ್ರವೇಶಿಸದೆ ಅಸುರ ಸ್ವಭಾವವಾಗಿರುವ ಈ ಕ್ರೋಧವನ್ನು ತ್ಯಾಗಮಾಡಿದರೆ ಮಾತ್ರ ಸ್ವರ್ಗಪಥದಲ್ಲಿ ಮುನ್ನಾಗಿ ದೇವ ಸ್ವರೂಪಿಯಾಗಲು ಸಾಧ್ಯವೆಂದು ಹೇಳಲಾಗಿದೆ. ಆದಕ್ಕಾಗಿಯೇ ಬಸವಣ್ಣನವರು 'ಕ್ರೋಧವೇಕೋ ಶರಣ ವೇದ್ಯವೆನಿಸುವರಿಗೆ' ಎಂದು ಪ್ರಶ್ನಿಸಿ ಕ್ರೋಧದಿಂದಾಗುವ ಹಾನಿಯನ್ನು ಸೂಚ್ಯವಾಗಿ ತಿಳಿಸಿ ದೇವಸ್ವರೂಪಿಯಾಗಲು ಅದು ತಡೆಯೊಡ್ಡುತ್ತದೆ ಎಂದು ಎಚ್ಚರಿಸಿದ್ದಾರೆ. ಬದುಕಿನ ಉದ್ದೇಶವೂ ಮಾನವನು ದೇವನಾಗಬೇಕೆಂಬುದೇ ಆಗಿರುವಾಗ ದಾನವನಾಗಿರುವ ಈ ಕ್ರೋಧಕ್ಕೆ ಹತ್ತಿರ ಸುಳಿಯಲೂ ಬಿಡಬಾರದು.

ಕ್ರೋಧ, ಕೋಪವೆಂದರೆ ಮನಸ್ಸಿನ ಉದ್ರೇಕದ ಸ್ಥಿತಿ. ಉದ್ರೇಕ ಎಂದೆಂದೂ ಒಳಿತಾದುದಲ್ಲ. ಯಾವುದೇ ವಿಷಯದಲ್ಲೂ ಉದ್ರೇಕಗೊಳ್ಳಬಾರದು; ಉದ್ರೇಕಕ್ಕೆ ಅವಕಾಶವನ್ನೇ ನೀಡಬಾರದು ಎಂದು ಹೇಳುತ್ತಾರೆ ಜ್ಞಾನಿಗಳು. ಸಾಮಾನ್ಯವಾಗಿ ಜನರು ಕೋಪವೆಂಬುದು ಹೊಲೆತನ ಎಂದು ಹೇಳಿರುವುದನ್ನು ನಾವು ಕೇಳಿಬಲ್ಲೆವು. ಆದರ ಅರ್ಥ ಕೋಪವನ್ನು ಸದಾ ದೂರವಿಡಬೇಕೆಂಬುದೇ ಆಗಿದೆ. ಕ್ರೋಧವೆಂಬುದು ನಾಯಿಯ ಹಾಗೆ ಎಂದೂ ಹೇಳುವುದಿದೆ. ಏಕೆಂದರೆ ದುಷ್ಟರನ್ನು, ಕಳ್ಳರನ್ನು ನೋಡಿದರೆ ಅದು ಬೊಗಳುತ್ತದೆ, ಆಗ ಅದು ಒಳ್ಳೆಯದು; ಯಾವಾಗ ಅದು ನಮ್ಮ ಇಷ್ಟರಿಗೆ ಬೊಗಳುತ್ತದೆ, ಕಚ್ಚುತ್ತದೆ, ಆಗ ಅದು ಕೆಟ್ಟದು ಎಂದು ಹೇಳುತ್ತಾನೆ ದಿಯೋಗರಿಬೀ ಇರ್ ಎಂಬ ಸಜ್ಜನನು. ಈ ಮಾತಿನಿಂದ ಕ್ರೋಧವು ಒಳ್ಳೆಯದೂ ಕೆಟ್ಟದ್ದೂ ಎರಡೂ ಆಗಿರುತ್ತದೆಯೆಂದು ಹೇಳಿದೆ. ಆದರೆ ಹೆಚ್ಚಿನಂಶ ಕ್ರೋಧ ಒಳ್ಳೆಯದು ಅಲ್ಲವೇ ಅಲ್ಲ, ಅದು ಕೆಟ್ಟದ್ದೇ. ಕ್ರೋಧವೆಂಬ ನಾಯಿಯು ಕಚ್ಚಲಿ ಅಥವಾ ನೆಕ್ಕಲಿ ಎರಡೂ ವಿಪರೀತವೇ. ಆದುದರಿಂದ ಕ್ರೋಧವನ್ನು ಎಂದೆಂದೂ ದೂರವೇ ಇಡಬೇಕು; ಸಂಕೋಲೆ ಹಾಕಿಯೇ ಕಟ್ಟಿಡಬೇಕು.

ನಮಗೆ ಉಪಕಾರ ಮಾಡಿದವರ ಮೇಲೆ, ಶ್ರೇಷ್ಠ ಸಜ್ಜನರ ಮೇಲೆ ಯಾವತ್ತು ಸಿಟ್ಟುಗೊಳ್ಳಬಾರದು ಎಂದು ಹೇಳಿದ್ದಿದೆ. ಹಾಗಾದರೆ ದುಷ್ಟರಮೇಲೆ ಕೋಪಿಸಬಹುದೇ? ಎಂದರೆ ಅದೂ ಸಲ್ಲದು. ವಾದೀಭಸಿಂಹ ಎಂಬ ಜನಮುಖಿಗಳು

*"ಅಪಕುರ್ವತ ಕೋಪಶ್ಚೇತ್ ಕಿಂ ನ ಕೋಪಾಯಿ ಕುಪ್ಯಸಿ*
*ತ್ರಿವರ್ಗಸ್ಯಾಪವರ್ಗಸ್ಯ ಜೀವಿತಸ್ಯ ಚ ನಾಶನೇ"*

ಅಯ್ಯಾ! ಅಪಕಾರ ಮಾಡಿದವರ ಮೇಲೆ ಕೋಪಿಸುವೆಯೆಂದಾದರೆ ಕೋಪದ ಮೇಲೆಯ ಏತಕ್ಕಾಗಿ ಕೋಪಿಸುವುದಿಲ್ಲ? ಏಕೆಂದರೆ ಕೋಪವು ಧರ್ಮ-ಅರ್ಥ- ಕಾಮ-ಮೋಕ್ಷವೆಂಬ ಪುರುಷಾರ್ಥವನ್ನು ಮಾತ್ರವಲ್ಲ, ಇಡೀ ಜೀವನವನ್ನೇ ನಾಶಗೊಳಿಸಿಬಿಡುತ್ತದೆ. ಹೀಗಿರುವಾಗ ಸರ್ವನಾಶ ಮಾಡುವ ಆ ಕೋಪದ ಮೇಲೆಯೇ ಕೋಪಿಸಿ ಎಂದು ಹೇಳಿರುವುದು ಚಿಂತನಮಾಡಬೇಕಾದ ಸೂಕ್ತಿಯಾಗಿದೆ.

ಕ್ರೋಧವೆಂಬುದದು ಭಯಂಕರವಾದ ಬೆಂಕಿ. ಆದ್ದರಿಂದಲೇ ಕ್ರೋಧಾನಲ ಎನ್ನುತ್ತಾರೆ. ಕೋಪ ಬರುವಂತಹ ನುಡಿಗಳನ್ನು ಯಾರಾದರೂ ಆಡಿದರೆಂದರೆ ನಮ್ಮಲ್ಲಿ ಕೋಪ ಭುಗಿಲೇಳುತ್ತದೆ. ಇದನ್ನೇ ನಾವು ಮೈಯಲ್ಲಿ ಬೆಂಕಿ ಉರಿದಂತಾಯಿತು ಎಂದು ಹೇಳುವುದಿದೆ. ಅಂದ ಮೇಲೆ ಕೋಪವೆಂಬುದು ಬೆಂಕಿ ಎಂಬುದು ಸ್ಪಷ್ಟವಾಗುತ್ತದೆ. ಈ ಬೆಂಕಿ, ಕ್ರೋಧ ಬಂದವನಿಗೂ, ಕೋಪಕ್ಕೆ ಪಾತ್ರನಾದವನನ್ನು ಸುಟ್ಟು ಹಾಕುವಂತಹದ್ದು. ಹೀಗಾಗಿ 'ನಾಸ್ತಿ ಕ್ರೋಧ ಸಮೋ ವಹ್ನಿ' ಎಂದು ಚಾಣಕ್ಯ ನೀತಿಯಲ್ಲಿ ಹೇಳಿದುದು. ಕೋಪಬಂದಾಗ ಮಾನವನು ಜ್ಞಾನಾಂಧನೂ ಕಾರ್ಯಾಂಧನೂ ಆಗುತ್ತಾನೆ. ಆದ್ದರಿಂದಲೇ ಕ್ರೋಧ ಬಂದವನಿಗೆ ಕ್ರೋಧಾಂಧ ಎನ್ನುತ್ತಾರೆ.

ಕೋಪ ಬಂದವನಿಗೆ ಇಂತಹದನ್ನು ನುಡಿಬಹುದು, ಇಂತಹುದನ್ನು ನುಡಿಯಬಾರದೆಂಬ ವಿವೇಚನೆ ಇಲ್ಲದಾಗುತ್ತದೆ. ಕೋಪ ಬಂದವನು ಮಾಡದ ಕೆಟ್ಟಕಾರ್ಯವಿಲ್ಲ, ಅವನು ನುಡಿಯದೆ ಇರುವ ಒಂದೂ ಕೆಟ್ಟ ನುಡಿಯಿಲ್ಲ ಎಂದು ಮಹಾಭಾರತದಲ್ಲಿ ಹೇಳಿದ ನುಡಿಯಿದೆ. ಕಾರಣ, ಕೋಪಬಂತೆಂದರೆ ತಾಪವೇರುತ್ತದೆ. ಕೋಪವೇರಿದಂತೆ ತಾಪವು ಏರುತ್ತ ಹೋಗುತ್ತದೆ. ತಾಪವೇರಿತೋ ಅದು ಮಸ್ತಕದೊಳಕ್ಕೆ ನುಗ್ಗುತ್ತದೆ. ರೋಷವೇರಿತೊ ಸರಿ, ಆತ ಮನಸ್ಸಿನ ಸ್ಥಿಮಿತಿ ಕಳಕೊಂಡು ಹುಚ್ಚನಾಗುತ್ತಾನೆ. ಆಗ ಏನು ಮಾತನಾಡುತ್ತೇನೆ, ಏನು ಮಾಡುತ್ತಿದ್ದೇನೆ ಎಂಬುದೇ ಆತನ ಲಕ್ಷ್ಯಕ್ಕೆ ಬರುವುದಿಲ್ಲ. ಇದರಿಂದಾಗಿ ಭಯಂಕರ ಅನಾಹುತ ನಡೆದು ಹೋಗುತ್ತದೆ. ಇದನ್ನು ಗಾದೆ ಮಾತು ಹೀಗೆನ್ನುತ್ತದೆ – 'ಕೋಪತಾಪತನ್ನು, ತಾಪಬ್ರಹ್ಮೇತಿ ತನ್ನು'. ಕೋಪದಿಂದಾಗು ವಷ್ಟು ಅನರ್ಥ, ಅನಾಹುತ ಇನ್ನಾವುದರಿಂದಲೂ ಆಗುವುದಿಲ್ಲ. ಈ ಕೋಪ ಅಮರ್ಷರೂಪ-ಮತ್ಸರಯುಕ್ತ ರೂಪವನ್ನು ಹೊಂದಿತೆಂದಾದರೆ ಅದರಿಂದ ಏನಾದೀತು, ಏನಾಗದು ಎಂದು ಹೇಳುವುದೇ ಕಷ್ಟ. ಇಂತಹ ಕೋಪವು ಮನುಷ್ಯನನ್ನು ಕೊಂದುಹಾಕುತ್ತದೆ. ಈ ಕೋಪವನ್ನು ಗೆದ್ದವನು ಶ್ರೇಯಸ್ಸು ಹೊಂದುತ್ತಾನೆ. "ಕೋಪಗೊಂಡ ಯಾವನು ತಾನೇ ಪಾಪವನ್ನು ಮಾಡುವುದಿಲ್ಲ' ಕೋಪಗೊಂಡವನು ಕಾರ್ಯಾಕಾರ್ಯಗಳ ವಿವೇಚನೆಯೇ ಇಲ್ಲದೆ ಗುರುಜನರನ್ನು ಸಂಹರಿಸುತ್ತಾನೆ. ಸತ್ಪುರುಷರನ್ನು ಕ್ರೂರವಾದ ಮಾತುಗಳಿಂದ ಹೀಯಾಳಿಸುತ್ತಾನೆ. ಕೋಪಗೊಂಡವನಿಗೆ ಯಾವ ಮಾತನ್ನು ಹೇಳಬೇಕು, ಯಾವ ಮಾತನ್ನು ಹೇಳಬಾರದು ಎಂಬ ಪರಿಜ್ಞಾನವೇ ಇರುವುದಿಲ್ಲ. ಅವನು ಮಾಡಬಾರದೆನ್ನುವ ಕಾರ್ಯವಿಲ್ಲ; ಆಡಬಾರದೆನ್ನುವ ಮಾತಿಲ್ಲ. ಮಾಡಬಾರದುದನ್ನು ಮಾಡುತ್ತಾನೆ; ಆಡಬಾರದುದನ್ನು ಆಡುತ್ತಾನೆ. ಯಾವನು ಹೃದಯಾಂತರಾಳದಿಂದ ಹುಟ್ಟಿಬಂದ ಕೋಪವನ್ನು ಹಾವು ತನ್ನ ಪೊರೆಯನ್ನು ಕಳಚಿಹಾಕುವಂತೆ ಕ್ಷಮೆಯನ್ನಾಶ್ರಯಿಸಿ ತೊರೆಯುವನೋ ಅಂತಹವನೇ ಪುರುಷನೆನಿಸಿಕೊಳ್ಳುವನು" ಎಂಬುದು ರಾಮಾಯಣದಲ್ಲಿ ಆಂಜನೇಯನ ಅನುಭವ ನುಡಿ. ಮಾನವನ ಏಳಿಗೆಗೂ ಇಳಿಕೆಗೂ ಕೋಪವೇ ಮುಖ್ಯಕಾರಣವಾಗಿ ಇದೆ. ಯಾರು ಕೋಪವನ್ನು ಅಡಗಿಸುತ್ತಾರೆ ಅವರು ಅಭಿವೃದ್ಧಿ ಹೊಂದುವರು; ಯಾರು ಕೋಪವನ್ನು ದಮನ ಮಾಡುವುದಿಲ್ಲ ಅವರ ವಿನಾಶಕ್ಕೆ ಆ ಕೋಪವೇ ಕಾರಣವಾಗುತ್ತದೆ ಎಂಬುದು ಧರ್ಮರಾಜನ ನುಡಿ.

ಯಾವುದೇ ಒಂದರ ಮೇಲಿರುವ ಆಶೆ ಮತ್ತು ಅತಿಯಾದ ಆಸಕ್ತಿಯಿಂದ ಉದ್ಭವವಾದ ಪ್ರೀತಿಯ ಗುಣ ರಜೋಗುಣ. ಈ ಗುಣವು ಎಲ್ಲವನ್ನೂ ಮಾಡುವವನು ನಾನು ಎಂಬ ಅಹಂಕಾರಕ್ಕೆ ಆಶ್ರಯ, ಆಧಾರವಾಗಿ ಇದೆ. ಈ ಅಹಮ್ಮಿಗೆ ಅಪಮಾನವಾಗುವ ಪರಿಸ್ಥಿತಿಯುಂಟಾದಾಗ ರೋಷ ಪ್ರಕಟವಾಗುತ್ತದೆ. ಈ ಕ್ರೋಧ ರಜೋಗುಣ ಸಮುದ್ಭವವು, ಕಾಮಸ್ವಭಾವದಿಂದ ಮೂಡಿಬರುವಂತಹದ್ದು. ಇಷ್ಟಪಟ್ಟದ್ದು ದೊರಕದೆ ಹೋದಾಗ ಕ್ರೋಧ ತಲೆಯೆತ್ತುತ್ತದೆ. ಹೀಗಾಗಿ ಕಾಮವು ಕ್ರೋಧದ ತವರುಮನೆ ಎಂದು ಹೇಳಲಾಗುತ್ತದೆ. ಈ "ಕಾಮಕ್ರೋಧ ಲೋಭದಿಂದ ಕಟ್ಟುವಡೆದು" (ಬಸವಣ್ಣ) ಬಿದ್ದಿರುವೆವು ನಾವು.

ನಾವು ಉದ್ಧಾರವಾಗಬೇಕು, ಶ್ರೇಯಸ್ಸು ಪಡೆಯಬೇಕು, ಎಲ್ಲರ ಪ್ರೀತಿಪಾತ್ರರಾಗಬೇಕೆಂದು ಇದ್ದರೆ ನಾವು ಕೋಪವನ್ನು ತ್ಯಾಗಮಾಡಬೇಕು ಎಂದು ಹೇಳುವುದು ಸುಲಭ; ಆಚರಣೆಯಲ್ಲಿ ಮಾತ್ರ ಕಷ್ಟ ಏಕೆಂದರೆ ಒಬ್ಬೊಬ್ಬರ ಮನಃಸ್ಥಿತಿ, ಮನೋಭಾವ, ಸ್ವಭಾವ ಒಂದೊಂದು ತರಹದ್ದು ಆಗಿರುವಾಗ, ಒಬ್ಬನಿಗೆ ಸರಿ ಎಂದು ಕಂಡದ್ದನ್ನು ಇನ್ನೊಬ್ಬನು ವಿರೋಧಿಸಿದಾಗ ಅವನ ಮೇಲೆ ಇವನಿಗೆ ಕೋಪ ಬರುತ್ತದೆ. ತನ್ನದೇ ಸರಿ ಎಂದು ತಿಳಿದುಕೊಂಡಿರುವವನು ಇನ್ನೊಬ್ಬನದೂ ಅಷ್ಟೇ ಸರಿ ಎಂದು ಭಾವಿಸಿ ಸಹನೆಯನ್ನು ಹೊಂದುವುದೇ ಕೋಪ ನಿವಾರಣೆಗೆ ಉತ್ತಮೌಷಧವು. ಇದರಿಂದ ವಿರಸ ಬೆಳೆಯದೆ ಇಬ್ಬರಿಗೂ ಒಳಿತಾಗುತ್ತದೆ. ಆತ್ಮವಿಶ್ವಾಸಕ್ಕೆ ಅವಕಾಶ ಪ್ರಾಪ್ತವಾಗುತ್ತದೆ. ಆತ್ಮ ವಿಕಾಸವಾದಂತೆ ಮನುಷ್ಯನು ದಿವ್ಯಲೋಕಪಥದಲ್ಲಿ ಮುಂದುವರಿಯುತ್ತಾನೆ. ಕ್ರೋಧ, ಕೋಪ, ಅಮರ್ಷ, ರೋಷ, ಕ್ಷುದೆ, ಸಿಟ್ಟು, ಸಿಡುಕು ಮೊದಲಾದ ಅನೇಕ ಶಬ್ದಗಳನ್ನು ಬಳಸಿ ಹೇಳುವ ಈ ಉಗ್ರ ಸ್ವಭಾವದ ತ್ಯಾಗದಿಂದ ಯಾವ ಫಲಪ್ರಾಪ್ತವಾಗುತ್ತದೆಂದು ಗೀತೆಯಲ್ಲಿ ಹೇಳಿದ ನುಡಿಗಳು ನಮಗೆ ಮಾರ್ಗದರ್ಶನ ಮಾಡುವಂತಹುಗಳಾಗಿವೆ –

ಪ್ರೀತಿ, ಭೀತಿ ಮತ್ತು ಕ್ರೋಧ ಮೊದಲಾದ ಭಾವನೆಗಳಿಗೆ ಬಲಿಯಾಗದೆ ಆತ್ಮದ ವಿಚಾರದಲ್ಲಿಯೇ ಮಗ್ನನಾಗಿರುವವವನು ಸ್ಥಿತಪ್ರಜ್ಞನೆಂದೆನಿಸಿಕೊಳ್ಳುತ್ತಾನೆ.

ಕಾಮ ಮತ್ತು ಕ್ರೋಧ ಇವನ್ನು ತ್ಯಾಗಮಾಡಿ, ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡು, ಆತ್ಮವನ್ನು ಅರ್ಥಮಾಡಿಕೊಂಡ ಸಂನ್ಯಾಸಿಗೆ ಸರ್ವತ್ರ ಆನಂದ ಸ್ವರೂಪನಾದ ಪರಬ್ರಹ್ಮನೇ ತುಂಬಿರುತ್ತಾನೆ.

ಈ ಭವದಿಂದ ಮುಕ್ತಿ ಹೊಂದಲು ಬಯಸುವಂತಹವರು ಕಾಮ ಮತ್ತು ಕ್ರೋಧವನ್ನು ತ್ಯಜಿಸಬೇಕು. ಶುದ್ಧಬುದ್ಧಿಯಿಂದ ಕೂಡಿ, ಧೃತಿಯಿಂದ ಅಹಂಕಾರ, ಸ್ಥಾನಮಾನದ ಬಲ, ಗರ್ವ, ಆಶೆ, ಕ್ರೋಧ ಮೊದಲಾದವುಗಳನ್ನು ತ್ಯಜಿಸಿ, ಸಮಾಧಾನ ಚಿತ್ತದಿಂದ ಇರುವವನು ಬ್ರಹ್ಮಪ್ರಾಪ್ತಿಗೆ ಯೋಗ್ಯನಾಗುತ್ತಾನೆ.

ಕೋಪವಿಲ್ಲದವನು ತನಗೆ ಅತ್ಯಂತ ಪ್ರಿಯನು ಎಂಬ ಭಗವದ್ ವಚನ ಸದಾ ನೆನಪಿನಲ್ಲಿಟ್ಟುಕೊಂಡು ಕೋಪ ತ್ಯಾಗಮಾಡಿ ಭಗವಂತನಿಗೆ ಪ್ರಿಯನಾಗಲು ಯತ್ನಿಸುವುದು ತನಗೂ ಲೋಕಕ್ಕೂ ಒಳಿತಲ್ಲವೆ!

*ಧನ್ಯಾಸ್ತೇ ಪುರುಷ ಶ್ರೇಷ್ಠಾ ಯೋ ಬುದ್ಧ್ಯಾ ಕೋಪಮುತ್ಥಿತಮ್*
*ನಿರುನ್ಧನ್ತಿ ಮಹಾತ್ಮನೋ ದೀಪ್ತಮಗ್ನಿಮಿವಾದ್ಭುಸಾಂ ॥*

(ಸುಂದರಕಾಂಡ ೫೫.೩)

ಉರಿಯುತ್ತಿರುವ ಬೆಂಕಿಯನ್ನು ನೀರಿನಿಂದ ಆರಿಸುವಂತೆ ಹೃದಯಾಂತರಾಳದಿಂದ ಉಕ್ಕಿಬಂದ ಕೋಪವನ್ನು ಬುದ್ಧಿಪೂರ್ವಕವಾಗಿ ತಡೆಯುವ ಮಹಾತ್ಮರೇ ಧನ್ಯ.

'ತನಗೆ ಮುನಿದವರಿಗೆ ತಾ ಮುನಿಯಲೇಕಯ್ಯಾ' ಎಂಬ ಬಸವಣ್ಣನವರ ಈ ನುಡಿ ಎಷ್ಟು ಅರ್ಥಗರ್ಭಿತವಾದುದಲ್ಲವೇ!

'ಕ್ರೋಧ ಜ್ಞಾನವ ತಿಂದಿತ್ತು'

*(ಮುಂದುವರಿಯುತ್ತವೆ)* ★

## ಆಜೀವ ಸದಸ್ಯರುಗಳ ಹೃದಯವಂತಿಕೆಗೆ ಕೃತಜ್ಞತೆಗಳು

ಸನ್ಮಾನ್ಯರೇ,

ಸಿದ್ಧಗಂಗಾ ಮುನ್ನಡೆಗೆ ಇರುವ ಆರ್ಥಿಕ ಪರಿಸ್ಥಿತಿಯನ್ನು ನಿಮ್ಮ ಗಮನಕ್ಕೆ ಪದೇ ಪದೇ ನಿವೇದಿಸಿಕೊಳ್ಳಲಾಗುತ್ತಿದೆ. ಈ ಸಮಸ್ಯೆಯನ್ನು ಅರ್ಥಮಾಡಿಕೊಂಡು ಆಜೀವ ಸದಸ್ಯರು ಮುಂದಾಗಿ ಹೆಚ್ಚುವರಿ ಚಂದಾವನ್ನು ಉದಾರತೆಯಿಂದ ನೀಡುತ್ತಿದ್ದಾರೆ. ಶ್ರೀಮಠದ ಪರವಾಗಿ ಹಾಗೂ ಪತ್ರಿಕೆಯ ಪರವಾಗಿ ಅವರಿಗೆ ಕೃತಜ್ಞತಾಪೂರ್ವಕ ಧನ್ಯವಾದಗಳು. ಪ್ರಸ್ತುತವಿರುವ ಆಜೀವ ಚಂದಾ ೧,೦೦೦ ರೂ.ಗೆ ಸರಿಹೊಂದುವಂತೆ ಸಂದಾಯ ಮಾಡದೇ ಇರುವವರು ಪ್ರಾರಂಭದಲ್ಲಿ ಸಲ್ಲಿಸಿದ್ದ ರೂ. ೫೦೦/- ರೂ. ೬೦೦/- ಕಳೆದು ಉಳಿಕೆ ರೂ. ೫೦೦/- ರೂ. ೪೦೦/- ಗಳನ್ನು ತ್ವರಿತವಾಗಿ ಕಳುಹಿಸಿಕೊಡಬೇಕೆಂದು ಕೋರುತ್ತೇವೆ. ನಿಮ್ಮ ವಿಳಾಸದಲ್ಲಿರುವ ಎಲ್.ಎಂ. ನಂಬರ್ ಸೂಚಿಸಿ ಈ ಉಳಿಕೆ ಚಂದಾ ಹಣವನ್ನು ನಗದು/ಎಂ.ಒ./ಡಿ.ಡಿ./ಚೆಕ್ ಮೂಲಕ ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿಕೊಡಬೇಕಾಗಿ ವಿನಮ್ರ ಪ್ರಾರ್ಥನೆ.

ಹೆಚ್.ಬಿ. ಗಂಗಾಧರಯ್ಯ, ಪ್ರಕಾಶಕರು

ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ, ತುಮಕೂರು – ೫೭೨ ೧೦೪.

# ಸ್ವತಂತ್ರ ಭಾರತ ಒಂದು ಅವಲೋಕನ

ನಮ್ಮ ಈಗಿನ ಸ್ವತಂತ್ರ ಬದುಕಿನ ಆನಂದಕ್ಕೆ ಕಾರಣರಾದ ಮಹನೀಯರಿಗೆ ಕೃತಜ್ಞತೆ ಸಲ್ಲಿಸಲು ಸದವಕಾಶ. ಮಹಾತ್ಮಗಾಂಧಿ, ಜವಾಹರ್ ಲಾಲ್ ನೆಹರು, ತಿಲಕ್, ಸುಭಾಷ್ ಚಂದ್ರ ಬೋಸ್‌ರಂತಹ ಅನೇಕ ಉಜ್ವಲ ದೇಶಭಕ್ತ ನಾಯಕರು ಮತ್ತು ಅವರ ಅಸಂಖ್ಯಾತ ನಿಷ್ಠಾವಂತ ಅನುಯಾಯಿಗಳು ಈ ಮಹತ್ಸಾಧನೆಯ ರೂವಾರಿಗಳು. ಈ ಎಲ್ಲಾ ಮಹನೀಯರ, ಮಹಾನ್‌ತ್ಯಾಗ ಮತ್ತು ನಿಸ್ವಾರ್ಥಶ್ರಮದ ಉತ್ಕೃಷ್ಟಫಲ ಭಾರತದ ಸ್ವಾತಂತ್ರ್ಯ. ಈ ಅವಿಸ್ಮರಣೀಯರ ಶ್ರೇಷ್ಠ ತ್ಯಾಗದ ಫಲಾನುಭವಿಗಳು ನಾವು ಅವರಿಗೆ ಸದಾ ಋಣಿ. ಈ ದಿನ ಅವರಿಗೆ ತಲೆಬಾಗಿ ನಮಿಸೋಣ, ಈ ಮಹಾತ್ಯಾಗಿಗಳು ಪ್ರತಿಪಾದಿಸಿದ ಸ್ವಾತಂತ್ರ್ಯದ ಧ್ಯೇಯವಾಕ್ಯ ಜಗತ್ತಿನ ಜೀವನ ಪಥವಾಲಿ. ಉತ್ಕೃಷ್ಟ ಭಾರತ ನಮ್ಮ ಶಪಥವಾಗಲಿ.

## ಕೃಷಿ

ಬೆಳೆ ವಿಮೆಗಾಗಿ ರೂ. ೨೦೦ ಕೋಟಿಗಳು, ಬಿತ್ತನೆ ಬೀಜ ವಿತರಣೆಗೆ ರೂ. ೬೦ ಕೋಟಿಗಳು, ಆವರ್ತ ನಿಧಿಗೆ ರೂ. ೨೦೦ ಕೋಟಿಗಳು, ಕೃಷಿ ಸಂಶೋಧನೆಗೆ ರೂ. ೨೭ ಕೋಟಿಗಳು, ಶೇಕಡ ೬ರ ಬಡ್ಡಿ ದರದಲ್ಲಿ ಸಾಲ ನೀಡಲು ರೂ. ೮೦ ಕೋಟಿ ಸಹಾಯಧನ ಒದಗಿಸಲಾಗಿದೆ. ಕೃಷಿ ಸಾಲಗಳ ಮೇಲಿನ ಬಡ್ಡಿ ಮತ್ತು ಸುಸ್ತಿ ಬಡ್ಡಿ ಮನ್ನಾ ಸಂಬಂಧ ರೂ. ೯೫೦ ಕೋಟಿಗಳನ್ನು ಸಹಕಾರಿ ಸಂಸ್ಥೆಗಳಿಗೆ ಮರು ಪಾವತಿಸಲಾಗಿದೆ.

## ನೀರಾವರಿ

ನೀರಾವರಿ ಅಭಿವೃದ್ಧಿಗಾಗಿ ರೂ. ೩೪೨ ಕೋಟಿಗಳ ದಾಖಲೆ ಹಣವನ್ನು ಪ್ರಸಕ್ತ ೨೦೦೫-೦೬ನೇ ಸಾಲಿನಲ್ಲಿ ಹಂಚಿಕೆ ಮಾಡಲಾಗಿದೆ.

## ಆರೋಗ್ಯ

ಸ್ತ್ರೀ ಶಕ್ತಿ ತಂಡಗಳ ೨.೫ ಲಕ್ಷ ಪರಿಶಿಷ್ಟ ಸದಸ್ಯರಿಗೆ ಸಾರ್ವತ್ರಿಕ ವಿಮಾ ಯೋಜನೆಯೊಂದನ್ನು ಜಾರಿಗೊಳಿಸಲಾಗುವುದು. ೨೭ ಜಿಲ್ಲೆಗಳಿಗೆ ತಲಾ ಒಂದರಂತೆ ಆಂಬುಲೆನ್ಸ್ ಸೌಕರ್ಯ ಹಾಗೂ ೩೯ ಹಿಂದುಳಿದ ತಾಲ್ಲೂಕುಗಳ ವ್ಯಾಪ್ತಿಯ ೩೯೯ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ೨೪ ಗಂಟೆಗಳ ನಿರಂತರ ಸೇವೆ ಕಲ್ಪಿಸಲಾಗುವುದು.

## ಶಿಕ್ಷಣ

ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ ಮತ್ತು ಸಾಕ್ಷರತೆ ಪ್ರಮಾಣದಲ್ಲಿ ಸುಧಾರಣೆ ತರಲು ೪,೬೮೭ ಪ್ರಾಥಮಿಕ ಹಾಗೂ ೨,೧೦೪ ಪ್ರೌಢಶಾಲಾ ಶಿಕ್ಷಕರ ನೇಮಕಾತಿ ಪ್ರಕ್ರಿಯೆ ಜಾರಿಯಲ್ಲಿದೆ, ಚಾಮರಾಜನಗರ ಮತ್ತು ಗುಲ್ಬರ್ಗಾ ಜಿಲ್ಲೆಯ ಎಲ್ಲಾ ಸರ್ಕಾರಿ ಶಾಲೆಗಳಲ್ಲಿ ಉಪಗ್ರಹದ ನೆರವಿನೊಂದಿಗೆ ದೂರದರ್ಶನ ಹಾಗೂ ರೇಡಿಯೋ ಮೂಲಕ ಮಕ್ಕಳಿಗೆ ಕಲಿಯುವ ಅವಕಾಶ ಕಲ್ಪಿಸಲಾಗಿದೆ.

## ಮೂಲ ಸೌಕರ್ಯ

ಬೆಂಗಳೂರು ಮಹಾನಗರಕ್ಕೆ ರೂ. ೩೯೦ ಕೋಟಿಗಳ ಹೈ-ಟೆಕ್ ಸಿಟಿ ಯೋಜನೆ ಮತ್ತು ರೂ. ೬೫೦ ಕೋಟಿ ವೆಚ್ಚದ ಪರಿಫೆರಲ್ ರಿಂಗ್ ರಸ್ತೆ ಯೋಜನೆ ಶೀಘ್ರದಲ್ಲೇ ಅನುಷ್ಠಾನ. ರೂ. ೩೮೮೩ ಕೋಟಿಗಳ ವೆಚ್ಚದಲ್ಲಿ ಕಾವೇರಿ ೪ನೇ ಹಂತದ ೨ನೇ ಘಟಕದ ಯೋಜನೆಗೆ ಚಾಲನೆ.

## ವಿದ್ಯುತ್

ರಾಜೀವ್‌ಗಾಂಧಿ ಗ್ರಾಮೀಣ ವಿದ್ಯುದ್ದೀಕರಣ ಯೋಜನೆಯಡಿ ರೂ. ೧೦೨೬ ಕೋಟಿ ವೆಚ್ಚದಲ್ಲಿ ೧೯ ಲಕ್ಷ ಗ್ರಾಮೀಣ ಕುಟುಂಬಗಳಿಗೆ ವಿದ್ಯುತ್ ಸೌಕರ್ಯ, ಬಡತನ ರೇಖೆಗಿಂತ ಕೆಳಗಿರುವ ಎಲ್ಲಾ ಗ್ರಾಮೀಣ ಕುಟುಂಬಗಳಿಗೆ ಉಚಿತ ವಿದ್ಯುತ್ ಸಂಪರ್ಕ ನೀಡಲು ನಿರ್ಧಾರ.

## ಕೈಗಾರಿಕೆ

ರೂ. ೨೩,೦೦೦ ಕೋಟಿಗಳ ಬಂಡವಾಳ ಹೂಡಿಕೆಯ ಒಎನ್‌ಜಿಸಿ ಯೋಜನೆಗೆ ಪ್ರಧಾನಿ ಅನುಮೋದನೆ. ಕೈಗಾರಿಕೆ ವಲಯದಲ್ಲಿ ರೂ. ೪೫,೬೦೦ ಕೋಟಿ ಮೌಲ್ಯದ ಬಂಡವಾಳ ಹೂಡಿಕೆಗೆ ರಾಜ್ಯ ಸರ್ಕಾರದ ಅನುಮೋದನೆ.

## ಹೈಕೋರ್ಟ್ ಪೀಠ

ಧಾರವಾಡ ಮತ್ತು ಗುಲ್ಬರ್ಗಾ ನಗರಗಳಲ್ಲಿ ಹೈಕೋರ್ಟ್ ಸಂಚಾರಿ ಪೀಠಗಳಿಗಾಗಿ ಬಹುದಿನಗಳಿಂದ ಕಾಣುತ್ತಿದ್ದ ಕನಸು ನನಸಾಗುತ್ತಲಿದೆ.

## ಸುವರ್ಣ ಕರ್ನಾಟಕ

''ಸುವರ್ಣ ಕರ್ನಾಟಕ'', ''ಬೃಹತ್ ಕರ್ನಾಟಕ'' ಮತ್ತು ''ಕರ್ನಾಟಕ ಗೆಜೆಟಿಯರ್'' ''ಸುವರ್ಣ ಪಥ'' ಎಂಬ ಮೂರು ಸಂಪುಟಗಳನ್ನು ಸುವರ್ಣ ಕರ್ನಾಟಕದ ವರ್ಷಾಚರಣೆಯ ಸಂದರ್ಭದಲ್ಲಿ ಬಿಡುಗಡೆ ಮಾಡಲಾಗುವುದು.

ಕರ್ನಾಟಕ ವಾರ್ತೆ





# ಡಾ|| ಎಸ್. ರಾಧಾಕೃಷ್ಣನರ ಚಿಂತನೆಗಳು - ಒಂದು ನೋಟ

– ಆರ್. ನಾಗರಾಜಯ್ಯ
ಪ್ರಾಧ್ಯಾಪಕರು,
ರಾಷ್ಟ್ರೀಯ ವಿದ್ಯಾಲಯ, ಶಿಕ್ಷಣ ಮಹಾವಿದ್ಯಾಲಯ,
ಜಯನಗರ, ಬೆಂಗಳೂರು – 560 011.

ನಮ್ಮ ರಾಷ್ಟ್ರ ಪ್ರಪಂಚದ ಅದ್ಭುತಗಳಲ್ಲಿ ಒಂದು ವಿಶೇಷವಾದ ಸೃಷ್ಟಿ. ಅನೇಕ ಮಹಾತ್ಮರಿಗೆ, ಸಾಧುಸಂತರಿಗೆ, ದೇಶಾಭಿಮಾನಿಗಳಿಗೆ, ರಾಷ್ಟ್ರನಾಯಕರಿಗೆ, ವಿಜ್ಞಾನಿಗಳಿಗೆ ಅತ್ಯುತ್ತಮ ಶಿಕ್ಷಕರಿಗೆ ಜನ್ಮಕೊಟ್ಟ ದೇಶ. ಅಂತಹ ಘನತೆವೆತ್ತ ಅತ್ಯುತ್ತಮ ಮಾನವೀಯ ವಾದಿ, ಚಿಂತಕ, ತತ್ವಜ್ಞಾನಿ, ಶಿಕ್ಷಣತಜ್ಞ, ಅತ್ಯುತ್ತಮ ಶಿಕ್ಷಕ. ಯಾವ ರಾಷ್ಟ್ರವೂ ತನ್ನ ಶಿಕ್ಷಕರಿಗಿಂತ ಮೇಲೇರಲಾರದು ಎಂಬ ಉದಾಹರಣೆಯನ್ನು ಪಾಲಿಸಿದ ಉತ್ತಮೋತ್ತಮ ಶಿಕ್ಷಕ ಎಂದು ಹೆಸರು ಪಡೆದು, ನಮ್ಮ ರಾಷ್ಟ್ರದ ರಾಜಕೀಯದಲ್ಲಿ ಒಂದು ಮೈಲಿಗಲ್ಲೆನಿಸಿದ ಡಾ|| ಎಸ್. ರಾಧಾಕೃಷ್ಣನ್‌ರವರ ಜನ್ಮದಿನಾಚರಣೆ – ಈ ತಿಂಗಳಲ್ಲಿ ಆಚರಣೆ ಮಾಡುವ ಶಿಕ್ಷಕರ ದಿನಾಚರಣೆಯನ್ನು ಆಚರಿಸುತ್ತೇವೆ.

ಡಾ|| ಎಸ್. ರಾಧಾಕೃಷ್ಣನ್ ಅವರು ಕ್ರಿ.ಶ. ೧೮೮೮ ರಲ್ಲಿ ತಮಿಳುನಾಡಿನಲ್ಲಿ ಜನ್ಮತಾಳಿದರು. ಅವರ ಶಾಲಾ ಶಿಕ್ಷಣ ಮತ್ತು ಕಾಲೇಜು ಶಿಕ್ಷಣ ತಮಿಳು ನಾಡಿನಲ್ಲಿಯೇ ಮುಗಿಯಿತು. ಪದವಿ ಸ್ವೀಕಾರ ಮಾಡಿದ ನಂತರ ತತ್ವಶಾಸ್ತ್ರ ಸ್ನಾತಕೋತ್ತರ ಪದವಿಯನ್ನು ೧೯೧೦ರಲ್ಲಿ ಪಡೆದರು. ನಂತರ ಭಾರತದ ವಿಶ್ವವಿದ್ಯಾಲಯಗಳಲ್ಲಿ ತತ್ವಶಾಸ್ತ್ರದ ಪ್ರಾಧ್ಯಾಪಕರಾಗಿ ಕೆಲವು ಕಾಲ ಸೇವೆಸಲ್ಲಿಸಿದರು. ಆಗ ಅವರಿಗೆ ಬರೆಯುವ ಕಲೆ ಮತ್ತು ಹವ್ಯಾಸಗಳೆರಡೂ ಒಂದುಗೂಡಿದ್ದರಿಂದ, ಪರಿಪೂರ್ಣತೆಯಿಂದ ಕೂಡಿದ ಮೇಧಾವಿತನದ ಲೇಖನಗಳನ್ನು ಬರೆದು ಭಾರತ ಮತ್ತು ವಿದೇಶಗಳಲ್ಲಿ ಪ್ರಖ್ಯಾತಿ ಪಡೆದರು.

ಇವರ ಪ್ರತಿಭೆ, ಮೇಧಾವಿತನ, ಬಹುಮುಖವುಳ್ಳ ವ್ಯಕ್ತಿತ್ವದ ಸಂಕೇತವಾಗಿ ೧೯೩೬ರಲ್ಲಿ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಧರ್ಮಶಾಸ್ತ್ರ ಮತ್ತು ತತ್ವಶಾಸ್ತ್ರಗಳ ತಾರ್ಕಿಕ ವಿಶ್ಲೇಷಣೆ ಮಾಡುವಂತಹ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸಿದ್ದಾರೆ. ಕ್ರಿ.ಶ. ೧೯೩೧ರಲ್ಲಿ ಆಂಧ್ರ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿ ನೇಮಗೊಂಡರು, ನಂತರ ಬನರಸ್ ಹಿಂದೂ ವಿಶ್ವವಿದ್ಯಾಲಯದ ಉಪಕುಲತಿಗಳಾಗಿ ಸೇವೆ ಸಲ್ಲಿಸಿದ್ದಾರೆ. ಆಗ ಚೀನಾದೇಶದ ವಿಶ್ವವಿದ್ಯಾಲಯಗಳ ಆಹ್ವಾನದ ಮೇಲೆ ಅಲ್ಲಿ ಭಾರತೀಯ ತತ್ವಶಾಸ್ತ್ರದ ಬಗ್ಗೆ ಮಹತ್ವಪೂರ್ಣವಾದ ಉಪನ್ಯಾಸಗಳನ್ನು ನೀಡಿದ್ದಾರೆ. ಇವೆಲ್ಲಾ ಕಾರ್ಯಭಾರವನ್ನು ಬಹಳ ಪರಿಣಾಮಕಾರಿಯಾಗಿ ನಿರ್ವಹಿಸಿದ್ದರಿಂದ ಭಾರತ ಸರ್ಕಾರ ಉನ್ನತ ಶಿಕ್ಷಣದ ಗುಣಮಟ್ಟ ಕಾಪಾಡಲು ಶ್ರಮಿಸುತ್ತಿರುವ ಸಂಸ್ಥೆಯಾದ ಯು.ಜಿ.ಸಿ.ಯ ಅಧ್ಯಕ್ಷರನ್ನಾಗಿ ನೇಮಿಸಿತು. ಆಗ ಅವರು ಕೈಗೊಂಡ ಕೆಲವು ನಿರ್ಣಯಗಳು ಇಂದಿಗೂ ನೈಜವಾಗಿ ಉಳಿದಿವೆ. ೧೯೫೨ ರಲ್ಲಿ ಉಪರಾಷ್ಟ್ರಪತಿಯ ಪದವಿಯನ್ನು ಅಲಂಕರಿಸಿ ಅವರು ರಾಜ್ಯಸಭೆಯ ಕಾರ್ಯಕಲಾಪಗಳನ್ನು ನಡೆಸಿಕೊಟ್ಟಿದ್ದು ಇವತ್ತಿನ ದಿನಗಳಲ್ಲಿ ಸ್ಮರಿಸಿಕೊಳ್ಳಬೇಕಾದ ಅಂಶ. ರಾಜಕಾರಣಿಯಲ್ಲದಿದ್ದರೂ ಅವರ ರಾಜಕೀಯಪ್ರಜ್ಞೆ ಎಲ್ಲರ ಮೆಚ್ಚುಗೆಗೆ ಪಾತ್ರವಾಗಿತ್ತು.

೧೯೬೨ರಲ್ಲಿ ಭಾರತದ ಅತ್ಯುನ್ನತವಾದ ಹುದ್ದೆ ರಾಷ್ಟ್ರಪತಿಯಾಗಿ ನೇಮಕವಾಗಿ ತಮ್ಮ ಮೇಧಾವಿತನದಿಂದ ರಾಜ್ಯಶಾಸ್ತ್ರದ ಆಡಳಿತದ ಸೂತ್ರವನ್ನು ಮೈಗೂಡಿಸಿಕೊಂಡು ರಾಷ್ಟ್ರದ ಘನತೆಯನ್ನು ಗೌರವವನ್ನು ಜೊತೆಗೆ ರಾಷ್ಟ್ರಪತಿ ಭವನದ ಪರಂಪರೆಯನ್ನು ಕಾಪಾಡಿದ ಕೀರ್ತಿ ಡಾ|| ಎಸ್. ರಾಧಾಕೃಷ್ಣನ್ ಅವರಿಗೆ ಸಲ್ಲುತ್ತದೆ.

ಡಾ|| ಎಸ್. ರಾಧಾಕೃಷ್ಣನ್ ಅವರು ಅಂತರಾಷ್ಟ್ರೀಯ ಮಟ್ಟದಲ್ಲಿ ಕೀರ್ತಿಪಡೆದ ಬರಹಗಾರರು. ಅವರ ಬರವಣಿಗೆಯ ಕ್ಷೇತ್ರಗಳು ಸಂಶೋಧನೆ, ಧರ್ಮಶಾಸ್ತ್ರ ಮತ್ತು ತತ್ವಶಾಸ್ತ್ರ ಅವರು ಪ್ರಕಟಣೆಗೊಳಿಸಿದ ಗ್ರಂಥಗಳು, ರವೀಂದ್ರನಾಥ ಠಾಕೂರರು ಮತ್ತು ತತ್ವಶಾಸ್ತ್ರ ಭಾರತೀಯ ತತ್ವಶಾಸ್ತ್ರ ಹಿಂದುಗಳ ಜೀವನ ವಿಧಾನ, ಶಿಕ್ಷಣ, ರಾಜಕೀಯ ಮತ್ತು ಯುದ್ಧ, ಸತ್ಯಕ್ಕಾಗಿ ಹುಡುಕಾಟ, ಧರ್ಮ ಮತ್ತು ಸಮಾಜ ಮತ್ತು ಸ್ವಾತಂತ್ರ್ಯ ಮತ್ತು ಸಂಸ್ಕೃತಿ ಮುಖ್ಯವಾದವು. ರಾಧಾಕೃಷ್ಣನ್ ಅವರ ಪ್ರಬಲವಾದ ನಂಬಿಕೆ ಎಂದರೆ ತತ್ವಶಾಸ್ತ್ರ ಮನುಷ್ಯನನ್ನು ಜೀವನದಿಂದ ಬೇರ್ಪಡಿಸ ಬಾರದು. ಅದು ಅವನಿಗೆ ಜೀವನದ ಅಗತ್ಯಗಳನ್ನು ಸವಾಲುಗಳನ್ನು ಮತ್ತು ನೈಜತೆಯನ್ನು ಅರ್ಥಮಾಡಿಕೊಳ್ಳಲು ಸಹಾಯಮಾಡಬೇಕು ಪರಿಪೂರ್ಣತೆಗಾಗಿ ಹೋರಾಟ ಮಾಡುವುದು ಮನುಷ್ಯನ ಹುಟ್ಟುಗುಣ, ಏಕೆಂದರೆ ಅವನು ಆಧ್ಯಾತ್ಮಿಕ ಜೀವಿ.

ಡಾ|| ರಾಧಾಕೃಷ್ಣನ್ ಪ್ರಕಾರ ಶಿಕ್ಷಣ ವ್ಯಕ್ತಿಯ ಮನಸ್ಸು ಮತ್ತು ಆತ್ಮಕ್ಕೆ ತರಬೇತಿ ಕೊಡಬೇಕು. ಬುದ್ಧಿಯ ವಿಕಾಸವಾಗು ವುದರ ಜೊತೆಗೆ ವ್ಯಕ್ತಿಯ ಆತ್ಮವಿಕಾಸವಾಗಬೇಕು. ಮಾನವ ಜನಾಂಗದ ಕಲ್ಯಾಣ ಶಿಕ್ಷಣದ ಅಂತಿಮ ಗುರಿಯಾಗಬೇಕು. ಶಿಕ್ಷಣ ವೈಜ್ಞಾನಿಕ ಮನೋಭಾವನೆಯನ್ನು ಬೆಳೆಸಬೇಕು. ಕುತೂಹಲವನ್ನು ಕೆರಳಿಸುವಂತಹ ಪ್ರಶ್ನಾತ್ಮಕವಾದ ವ್ಯಕ್ತಿಗಳನ್ನು ನಿರ್ಮಾಣಮಾಡ ಬೇಕು. ಮೇಲಾಗಿ ವ್ಯಕ್ತಿಯನ್ನು ಪ್ರಜಾಪ್ರಭುತ್ವದ ಮೌಲ್ಯಗಳನ್ನು ಅರ್ಥಮಾಡಿಕೊಂಡು ಆಚರಣೆಮಾಡುವಂತೆ ಮಾಡಬೇಕು. ಜೊತೆಗೆ ಶಿಕ್ಷಣ ವ್ಯಕ್ತಿಯಲ್ಲಿ ಸ್ವಯಂ ಶಿಸ್ತನ್ನು ಬೆಳೆಸಬೇಕು. ಹೊಸ ಆಲೋಚನೆಗಳಿಗೆ ಶಿಕ್ಷಣ ಬುನಾದಿಯಾಗಬೇಕು. ಮಹಿಳೆಯರಿಗೆ ಜವಾಬ್ದಾರಿಯನ್ನು ಅರಿತುಕೊಳ್ಳಬೇಕಾದರೆ ಶಿಕ್ಷಣ ಅತ್ಯಗತ್ಯವಾಗಿದೆ ಎಂದು ಪ್ರತಿಪಾದಿಸಿದ್ದಾರೆ.

### *ಡಾ|| ಎಸ್. ರಾಧಾಕೃಷ್ಣನ್ ದೃಷ್ಟಿಯಲ್ಲಿ ಒಂದು ಆದರ್ಶ ವಿಶ್ವವಿದ್ಯಾಲಯ ಹೇಗಿರಬೇಕು?*

ಒಂದು ವಿಶ್ವವಿದ್ಯಾಲಯದ ಪ್ರಥಮ ಜವಾಬ್ದಾರಿ ಎಂದರೆ ವ್ಯಕ್ತಿಯ ಬೌದ್ಧಿಕ, ಬಾವೋದ್ವೇಗದ ಮತ್ತು ಆಧ್ಯಾತ್ಮಿಕ ಅಂಶಗಳನ್ನು ವಿಕಾಸಮಾಡುವುದು. ಇಂತಹ ನಿಟ್ಟಿನಲ್ಲಿ ಶಿಕ್ಷಣ ನೀಡುವುದಾದರೆ ವ್ಯಕ್ತಿಯ ವೈಯಕ್ತಿಕವಾದ ಆಸೆಗಳು ಕಡಿಮೆಯಾಗುತ್ತವೆ. ವಿಶ್ವವಿದ್ಯಾಲಯಗಳು ವ್ಯಕ್ತಿಯನ್ನು ಬದ್ಧತೆಯಿಂದ ಕೆಲಸಮಾಡುವ ಪ್ರಾಪಂಚಿಕ ಆಸೆಯಿಂದ ಸಂಪೂರ್ಣವಾಗಿ ತೊರೆದು ಬದುಕುವ ಸಾಮರ್ಥ್ಯವನ್ನು ಬೆಳೆಸಬೇಕಾಗಿದೆ. ಜ್ಞಾನಕ್ಕಾಗಿ ವ್ಯವಸ್ಥಿತವಾದ ಹುಡುಕಾಟ ಮಾಡುವಂತೆ ಸಜ್ಜುಮಾಡಬೇಕಾದ ಅಗತ್ಯವಿದೆ. ವಿಶ್ವವಿದ್ಯಾಲಯಗಳು ಜ್ಞಾನವನ್ನು ಸ್ಮರಿಸಿಕೊಂಡು ಪರೀಕ್ಷೆಯಲ್ಲಿ ಉತ್ತೀರ್ಣರಾಗುವಂತಹ ಸಂಸ್ಕೃತಿಯುಳ್ಳ ಜನಾಂಗದ ಸಿದ್ಧತೆ ಮಾಡಬಾರದು. ಸಂಸ್ಕೃತಿಯನ್ನು ಜೀವನದ ಅವಿಭಾಜ್ಯ ಅಂಗವಾಗಿ ಮಾಡುವಂತಹ ಕೇಂದ್ರಗಳಾಗಬೇಕು.

ವಿಶ್ವವಿದ್ಯಾಲಯದ ಶಿಕ್ಷಕರು ಅತ್ಯಂತ ದಕ್ಷತೆಯಿಂದ ಕೂಡಿದ ಬೌದ್ಧಿಕ ಸಾಮರ್ಥ್ಯದಲ್ಲಿ ಉತ್ತುಂಗದಲ್ಲಿರುವಂತಹ, ನೈತಿಕತೆಯ ಪರಿಪಾಲನೆಯುಳ್ಳಂತಹ, ಸಂಸ್ಕೃತಿ ಪರಂಪರೆಯನ್ನು ಸೃಷ್ಟಿಮಾಡ ಬಲ್ಲಂತಹ ಪರಂಪರೆಯನ್ನು ಮೈಗೂಡಿಸುವ ಶಿಕ್ಷಕ ಸಮುದಾಯ ವಾಗಿರಬೇಕು. ಪ್ರಾಧ್ಯಾಪಕರಮಾತು, ಕೃತಿ ಮತ್ತು ಅವರ ಜೀವನವಿಧಾನ ವಿದ್ಯಾರ್ಥಿಗಳಿಗೆ ಒಂದು ಜೀವಂತ ಉದಾಹರಣೆ ಯಾಗಬೇಕು. ಅನೇಕ ಬಾರಿ ಬಹಳ ಮೇಧಾವಿಗಳಾದ ಪ್ರಾಧ್ಯಾಪಕರುಗಳು ತಮ್ಮ ವಿದ್ಯಾರ್ಥಿಗಳ ಬದುಕಿಗೆ ಅರ್ಥಕೊಡಲು ವಿಫಲರಾಗುತ್ತಾರೆ. ಇದಕ್ಕೆ ಕಾರಣ ಅವರು ವೃತ್ತಿಯಲ್ಲಿ ತೋರುವ ಆಸಕ್ತಿ ಮತ್ತು ಬದ್ಧತೆ ಬಹಳ ಕೆಳಮಟ್ಟದಲ್ಲಿರುತ್ತದೆ. ವಿಶ್ವವಿದ್ಯಾಲಯದ ಪ್ರಾಧ್ಯಾಪಕರು ನಿಜವಾದ ಆಚಾರ್ಯ ಅಥವಾ ಗುರುವಾಗಿರಬೇಕು. ಅವರಿಗೆ ದಯೆ, ಕರುಣೆ ಇರಬೇಕು. ಅವರ ಜೀವನದ ಆದರ್ಶಗಳು ಮೌಲ್ಯಗಳು ವಿದ್ಯಾರ್ಥಿಗಳ ಜೀವನಕ್ಕೆ ದಾರಿದೀಪವಾಗಬೇಕು. ವಿಶ್ವವಿದ್ಯಾಲಯದ ಪ್ರಾಧ್ಯಾಪಕರ ಆಯ್ಕೆ ಅವರ ಬೌದ್ಧಿಕ ಮೇಧಾವಿತನ ಮತ್ತು ಸಾಮಾಜಿಕ ಕಾಳಜಿಯಿಂದ ಕೂಡಿರಬೇಕು.

### *ವಿಶ್ವವಿದ್ಯಾಲಯದ ವಿದ್ಯಾರ್ಥಿ ಹೇಗಿರಬೇಕು?*

ಡಾ|| ಎಸ್. ರಾಧಾಕೃಷ್ಣನ್ ಅವರ ಪ್ರಕಾರ ವಿದ್ಯಾರ್ಥಿಗಳು ಜ್ಞಾನಸಂಪಾದನೆ ಮಾಡಲು ತಮ್ಮನ್ನು ತಾವೇ ಸಂಪೂರ್ಣವಾಗಿ ತೊಡಗಿಸಿಕೊಳ್ಳಬೇಕು. ಅವರಿಗೆ ಸ್ವಯಂಶಿಸ್ತು ಸರ್ವಕಾಲಕ್ಕೂ ಅಗತ್ಯವಾಗಿರಬೇಕು. ವಿದ್ಯಾರ್ಥಿಗಳಿಗೆ ಪಠ್ಯೇತರ ಚಟುವಟಿಕೆಗಳಲ್ಲಿ ಭಾಗವಹಿಸಲು ಸಾಕಷ್ಟು ಸ್ವಾತಂತ್ರ್ಯವಿರಬೇಕು. ಅವರ ಸಂಪೂರ್ಣವಾದ ಚಟುವಟಿಕೆ ಅಧ್ಯಾಯನದ ಕಡೆ ಇರಬೇಕು.

ಡಾ|| ಎಸ್. ರಾಧಕೃಷ್ಣನ್ ಅವರ ಶೈಕ್ಷಣಿಕ ವಿಚಾರಧಾರೆಗಳು ಇಂದೂ ಪ್ರಸ್ತುತ, ಸರ್ವಕಾಲಿಕವಾದವು. ಜೊತೆಗೆ ಪ್ರಯೋಗಿಕವಾದಂತಹವು. ಅಂತಹ ಮೇರು ಎತ್ತರದ ದಕ್ಷ ಶಿಕ್ಷಕ, ದಕ್ಷ ಆಡಳಿತಗಾರ ಜೊತೆಗೆ ಸತ್ಯ ಪ್ರಮಾಣಿಕತೆಗೆ ಹೆಸರಾದ ಡಾ|| ಎಸ್.ಆರ್. ಅವರನ್ನು ಶಿಕ್ಷಕ ದಿನಾಚರಣೆಯ ದಿವಸ ಸ್ಮರಿಸಿ ಗೌರವಿಸಬೇಕಾದ್ದು ಎಲ್ಲಾ ಪೌರರ ಕರ್ತವ್ಯ ಮತ್ತು ಇದು ಶಿಕ್ಷಕರ ವಿಶೇಷ ಮೂಲಭೂತ ಕರ್ತವ್ಯ. ಇಂತಹ ದಿನಾಚರಣೆಗಳನ್ನು ಆಚರಣೆಮಾಡಿಕೊಳ್ಳುವುದರ ಮೂಲಕ ಇಡೀ ಶಿಕ್ಷಕ ಸಮುದಾಯ ತಲೆಬಾಗಿ ನಮಸ್ಕರಿಸಿ ಅವರ ಆದರ್ಶಗಳನ್ನು ಮೈಗೂಡಿಸಿಕೊಂಡು ಶಿಕ್ಷಕ ವೃತ್ತಿಯ ಗೌರವವನ್ನು ಹೆಚ್ಚಿಸಲು ಪ್ರಾಮಾಣಿಕ ಪ್ರಯತ್ನ ಮಾಡುತ್ತೇವೆ ಎಂದು ಶಪಥಮಾಡೋಣ. ಆಗ ಶಿಕ್ಷಕರ ದಿನಾಚರಣೆ ಔಚಿತ್ಯಪೂರ್ಣವಾಗುತ್ತದೆ. ಸಾರ್ಥಕವಾಗುತ್ತದೆ. ಅರ್ಥಪೂರ್ಣವಾಗುತ್ತದೆ.

★







## ಒಂದೇ ನಾಣ್ಯದ ಎರಡು ಮುಖಗಳು

– ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ',
ನಂ. ೨/೨೦೪೫. ೧೧ನೇ ಕ್ರಾಸ್,
ಎಸ್.ಎಸ್. ಪುರಂ, ತುಮಕೂರು – ೫೭೨ ೧೦೨.
ದೂರವಾಣಿ : (೦೮೧೬) ೨೨೭೮೪೫

### ನಾಣ್ಯದ ಮೊದಲ ಮುಖ

(ಹಿಂದಿನ ಸಂಚಿಕೆಯಿಂದ)

*ನಿಸರ್ಗೋಪಚಾರ*

*ದೇಹೇ ಸರ್ವತ್ರ ಚೋಷ್ಣಸ್ಯ ಸಮತಾ ಲಾಘವಂ ಸುಖಮ್ ।*
*ಕ್ಷುತ್ ತೀಕ್ಷ್ಣಾ ಗಾಢನಿದ್ರಾ ಚ ಮನಸೋಽಪಿ ಪ್ರಸನ್ನತಾ ॥*
*ಶರೀರೇ ಕರ್ಮ ಸಾಮರ್ಥ್ಯಂ ಅನಾಲಸ್ಯ ಚ ಕರ್ಮಸು ।*
*ಸ್ವತಃ ಸ್ವೇದೋದ್ಗಮಃ ಕಾಲೇ ಸ್ವಸ್ಥತಾಂ ಲಕ್ಷಯಂತಿ ಹಿ ॥*

**ದೇ**ಹೆ ಸರ್ವತ್ರ ಚೋಷ್ಣಸ್ಯ ಸಮತಾ – ಶರೀರಪೂರ್ಣ ಸಮಾನವಾದ ಉಷ್ಣತೆ. ನೈಸರ್ಗಿಕವಾಗಿಯೇ ನಮ್ಮ ಶರೀರದ ಉಷ್ಣತೆ ಒಂದೇ ಸಮನಾಗಿರುವುದಿಲ್ಲ. ಬೇರೆಯ ಕಡೆಗಿಂತ ಬಾಯಿ, ಕಂಕಳು, ಮತ್ತು ಗುದದ್ವಾರಗಳಲ್ಲಿ ಉಷ್ಣತೆ ಸ್ವಲ್ಪ ಹೆಚ್ಚು. ಆದ್ದರಿಂದಲೇ ಥರ್ಮಾಮೀಟರ್ ಇಟ್ಟು ನೋಡಲು ಬಾಯಿ ಅಥವಾ ಕಂಕುಳನ್ನು ಬಳಸಲಾಗುತ್ತದೆ. ಆದರೆ ಅದೂ ಕೂಡ ಹೆಚ್ಚಿರಬಾರದು. ಈ ಜಾಗಗಳನ್ನು ಬಿಟ್ಟು ಮಿಕ್ಕ ಜಾಗಗಳಲ್ಲಿನ ಉಷ್ಣತೆ ಒಂದೇ ಸಮನಾಗಿರಬೇಕು. ಆದರೆ ಬಹಳಷ್ಟು ಜನರಿಗೆ ಮಂಡೆ ಬಿಸಿ, ಕೈಕಾಲು ತಣ್ಣಗೆ! ಕೈ ಕಾಲುಗಳು ಪೂರ್ಣ ತಣ್ಣಗಾಗುವ ಸ್ಥಿತಿ ಸಾವು. ದಿನ ನಿತ್ಯದಲ್ಲಿ ಹಾಗಾಗುವುದಿಲ್ಲ. ಆದರೆ ಹೊಟ್ಟೆ ತಲೆ ಹೆಚ್ಚು ಬಿಸಿ, ಕೈಕಾಲುಗಳು ಅದಕ್ಕಿಂತ ಕಡಿಮೆ ಶಾಖ ಇದು ಮಾಮೂಲಿ. ಇದು ಆರೋಗ್ಯವಂತ ಶರೀರಕ್ಕೆ ತದ್ವಿರುದ್ಧ. ಕಾರಣ, ತಲೆ, ಗೊಂದಲಗಳ ಸಂತೆ, ಹೊಟ್ಟೆಗೆ ಸದಾ ಮಿಕ್ಸರಿನಂತೆ ಕೆಲಸ ಕೈಕಾಲುಗಳು ತಣ್ಣಗಿರಲು ಹೃದಯಕ್ಕೆ ಹೆಚ್ಚು ಕೆಲಸ. ಆರೋಗ್ಯವಾಗಿರಲು ಶರೀರದ ಎಲ್ಲಾ ಜಾಗಗಳಲ್ಲೂ ಉಷ್ಣ ಸಮವಾಗಿರುವಂತೆ ನೋಡಿಕೊಳ್ಳಬೇಕು. ಲಾಘವಂ ಸುಖಮ್ – ಶರೀರ ಲಘುವಾಗಿ ಸುಖವಾಗಿರುವ ಭಾವನೆ. ಅಂದರೆ ಶರೀರ ಕೃಶವಾಗಿರಬೇಕೆಂದಲ್ಲ. ಎಷ್ಟೋ ಜನ ಸಣ್ಣಗಿರುತ್ತಾರೆ. ಆದರೆ, 'ಏನೋ ಭಾರ' ಎಂಬ ಅನಿಸಿಕೆ ಇರುತ್ತದೆ. ಕ್ಷುತ್ ತೀಕ್ಷ್ಣಾ – ತೀವ್ರ ಹಸಿವು. ನಾಗರೀಕ ಮಾನವ ಅನುಭವಿಸಿರದ ಒಂದು ಸ್ಥಿತಿ ! ಕಾಫಿ, ಟೀ ಮುಂತಾದ ಪೇಯಗಳಿಗೆ ಬಲಿಯಾದ ಮಾನವನಿಗೆ ತೀವ್ರ ಹಸಿವಿನ ಅನುಭವ ಬಹುಶಃ ಕಡಿಮೆ, ಗಾಢನಿದ್ರಾ – ಗಾಢನಿದ್ರೆ. 'ಚಿಂತೆ ಇಲ್ಲದವನಿಗೆ ಸಂತೆಯಲ್ಲಿ ನಿದ್ರೆ ಬಂತು' – ಎಂಬ ಗಾದೆಯಂತೆ. ಚ ಮನಸೋಽಪಿ ಪ್ರಸನ್ನತಾ - ಮತ್ತು ಆನಂದದಿಂದ ಕೂಡಿದ ಮನಸ್ಸು. ಸಿಡುಕು ಮೋರೆಯ ಮಂದಿಯೇ ಹೆಚ್ಚು !

ಶರೀರೇ ಕರ್ಮ ಸಾಮರ್ಥ್ಯಂ- ಶರೀರದಲ್ಲಿ ಕೆಲಸ ಮಾಡಲು ಬೇಕಾಗುವ ಶಕ್ತಿ. ಇದು ಎಲ್ಲ ವಯಸ್ಸಿನವರಿಗೂ ಎಲ್ಲರಿಗೂ ಒಂದೇ ಅಲ್ಲ. ಅವರವರ ವಯಸ್ಸು ಹಾಗೂ ದೈಹಿಕ ಬಲಕ್ಕನುಸಾರವಾಗಿ. ಆದರೆ, ಕೆಲಸ ಮಾಡುವ ಮನಸ್ಸಿರಬೇಕು. ಅನಾಲಸ್ಯ ಚ ಕರ್ಮಸು – ಕೆಲಸದಲ್ಲಿ ಸೋಮಾರಿತನವಿಲ್ಲದಿರುವಿಕೆ. ಹೈಟೆಕ್ ಯುಗದಲ್ಲಿ ಸೋಮಾರಿತನ ಸಾಮಾನ್ಯ. ಯಂತ್ರಗಳಿಂದ ಕೆಲಸ ಮಾಡಿಸಿಕೊಂಡ ರೂಢಿಯಾಗಿರುವುದರಿಂದ ಎಲ್ಲರೂ ಸೋಮಾರಿಗಳಾಗಿದ್ದೇವೆ. ಹುಡುಗರಲ್ಲಿ ಕೂಡ ಇದು ಸಹಜವಾಗಿದೆ. ಅಣ್ಣನಿಗೆ ಕೆಲಸ ಹೇಳಿದರೆ ಅವನು ಅದನ್ನು ತನ್ನ ತಮ್ಮನಿಗೆ ವರ್ಗಾಯಿಸಿ, ಆರಾಮವಾಗಿ ಟಿ.ವಿ. ನೋಡುತ್ತಾ ಟೀವಿಯಿಂದ ಕೂಡುತ್ತಾನೆ. 'ನಾಯಿಗೆ ಹೇಳಿದರೆ ನಾಯಿ ತನ್ನ ಬಾಲಕ್ಕೆ ಹೇಳಿತು' – ಎಂಬ ಗಾದೆಯ ಮಾತಿನಂತೆ. ಸ್ವತಃ ಸ್ವೇದೋದ್ಗಮಃ ಕಾಲೇ – ಕಾಲ ಕಾಲಕ್ಕೆ ಸರಿಯಾಗಿ ಹೊರಗಿನ ಸಹಾಯವಿಲ್ಲದೆ ಜಲ, ಮಲ ವಿಸರ್ಜನೆಯಾಗಬೇಕು. ಬೆಳಿಗ್ಗೆ ಎದ್ದ ತಕ್ಷಣ ಕಾಫಿ, ಸಿಗರೇಟ್, ನ್ಯೂಸ್ ಪೇಪರುಗಳ ಸಹಾಯವಿಲ್ಲದೆ ಮಲವಿಸರ್ಜನೆಯಾಗ ಬೇಕೆಂದರ್ಥ. ಸ್ವಸ್ಥತಾಂ ಲಕ್ಷಯಂತಿ ಹಿ– ಇವು ಆರೋಗ್ಯವಂತನ ಲಕ್ಷಣಗಳಾಗಿವೆ.

ಆಚಾರ್ಯ ಲಕ್ಷ್ಮಣ ಶರ್ಮರು ತಮ್ಮ ಗ್ರಂಥ 'ಸ್ವಾಧೀನ ಸ್ವಾಸ್ಥ್ಯ ಮಹಾವಿದ್ಯಾ'ದಲ್ಲಿ ಆರೊಗ್ಯದ ವಿವರಣೆಯನ್ನು ನೀಡಿರುವುದು ಹೀಗೆ.

ಡಾ|| ಲಿಂಡ್ಲರ್‌ರವರ ಪ್ರಕಾರ, ''ದೈಹಿಕ, ಮಾನಸಿಕ, ಸಾಮಾಜಿಕ ಹಾಗೂ ಆಧ್ಯಾತ್ಮಕ ಈ ಎಲ್ಲಾ ಸ್ತರಗಳಲ್ಲೂ ವ್ಯಕ್ತಿಯ ಸ್ಪಂದನವು ವಿಶ್ವಸ್ಪಂದನದೊಂದಿಗೆ ಹೊಂದಿಕೊಂಡು, ನಿಸರ್ಗದ ಬೆಳವಣಿಗೆಯ ಮಾರ್ಗದಲ್ಲಿದ್ದರೆ ಆ ವ್ಯಕ್ತಿ ಆರೋಗ್ಯವಾಗಿದ್ದಾನೆಂದು ಹೇಳಬಹುದು''.

ಡಾ|| ಲಿಂಡ್ಲರ್‌ರವರು ವಿಶ್ವ ಆರೋಗ್ಯ ಸಂಸ್ಥೆಯ ನಿರೂಪಣೆಯ ಜೊತೆಗೆ 'ಆಧ್ಯಾತ್ಮಿಕ ಆರೋಗ್ಯ' ಎಂಬ ಮತ್ತೊಂದು ತತ್ವವನ್ನೂ ಸೇರಿಸಿದರು. ಆಯುರ್ವೇದ, ಆತ್ಮ, ಇಂದ್ರಿಯ ಮತ್ತು ಮನವೆಂದು ಹೇಳಿದದೂ ಇದನ್ನೇ.

### ಆಧ್ಯಾತ್ಮಿಕ ಆರೋಗ್ಯ

ಅರ್ಜುನನ ಪ್ರಶ್ನೆ– ಬಂಧು ಬಾಂಧವರನ್ನು ಕೊಂದು ರಾಜ್ಯ ಗಳಿಸುವುದು ಸರಿಯೇ? ಶ್ರೀಕೃಷ್ಣರ ಉತ್ತರ – ಭಗವದ್ಗೀತೆ, ಅದರಲ್ಲಿ ಬರುವ ವಿಷಯ – ಪರಮಾತ್ಮ, ಜೀವಾತ್ಮ, ಮನಸ್ಸು, ಜ್ಞಾನ, ಕರ್ಮ, ಇಂದ್ರಿಯ, ಪರಾ, ಅಪರಾ, ಪ್ರಕೃತಿ, ಕ್ಷೇತ್ರ-ಕ್ಷೇತ್ರಜ್ಞ, ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗ, ರಾಜಯೋಗ ಇತ್ಯಾದಿ, ಇತ್ಯಾದಿ. ಅರ್ಜುನನ ಸರಳ ಪ್ರಶ್ನೆಗೆ ಇಷ್ಟೊಂದು ಕಠಿಣ ಉತ್ತರ ಏಕೆ? ನಮ್ಮ ಕಣ್ಣಿಗೆ ಮೇಲಿನ ಸುಂದರವಾದ ಕಟ್ಟಡ ಕಾಣುತ್ತದೆಯೇ ವಿನಃ ಆದರ ಕೆಳಗಿರುವ ಅಡಿಪಾಯ ಕಾಣುವುದಿಲ್ಲ. ಆದರೆ, ಅಡಿಪಾಯವಿಲ್ಲದೇ ಕಟ್ಟಡವಾಗುತ್ತದೆಯೇ? ಅದು ಭದ್ರವಾಗಿದ್ದಷ್ಟೂ ಕಟ್ಟಡ ಬಿಗಿ, ವಿಷಯ ಯಾವುದೇ ಆಗಿರಲಿ ಅಡಿಪಾಯ ಭದ್ರವಾಗಿರಬೇಕಾದರೆ ಅದು ಆಧ್ಯಾತ್ಮಿಕ ತಳಹದಿಯ ಮೇಲೆ ನಿಂತಿರಬೇಕು. ಆಧ್ಯಾತ್ಮ ಎಂದರೆ ಮತ್ತೇನೂ ಅಲ್ಲ ಪ್ರತಿಯೊಬ್ಬರೂ 'ನಾನು' 'ನಾನು' ಎಂದು ಹೇಳಿಕೊಳ್ಳುವುದರ ತಿಳಿವಳಿಕೆ ಪ್ರಯತ್ನ. ಇದು ಸೃಷ್ಟಿಯ ಅಡಿಗಲ್ಲು. ಯಾವುದೇ ಜ್ಞಾನವೂ ಇದರ ಮೇಲೆಯೆ ನಿಲ್ಲಬೇಕು. ಆಗಲೇ ಅದು ಭದ್ರ. ವಿಜ್ಞಾನದ ಅಡಿಪಾಯದ ಮೇಲೆ ನಿಲ್ಲಿಸಲು ಆಧುನಿಕ ವೈದ್ಯವಿಜ್ಞಾನವನ್ನು ತತ್ವಶಾಸ್ತ್ರದಿಂದ ಬೇರ್ಪಡಿಸಲಾಯಿತು. ಇದರಿಂದ ಒಂದು ಅನುಕೂಲ. ಹೇಳುವ ವಿಷಯವನ್ನು ಪ್ರಯೋಗದಿಂದ ತೋರಿಸಬಹುದು. ವಿಷಯಕ್ಕೆ ಹೆಚ್ಚು ಖಚಿತತೆ ಬಂತು. ಶರೀರದ ಒಳ ಅಂಗಗಳನ್ನೂ ಸಹ ಹೊರ ಅಂಗಗಳಷ್ಟೇ ನಿಖರವಾಗಿ ತಿಳಿದುಕೊಳ್ಳಲು ಸಹಾಯವಾಯ್ತು. ಆದರೆ ಮನುಷ್ಯನಲ್ಲಿ ಎಷ್ಟೋ ಬೇರೆ ಬೇರೆ ಅಂಶಗಳು ಮಿಶ್ರಿತವಾಗಿವೆ. ಮನಸ್ಸು, ಬುದ್ಧಿ, ಜೀವ ಇವೆಲ್ಲಾ ಪ್ರಯೋಗಾಲಯಕ್ಕೆ ಸಿಕ್ಕುವ ವಸ್ತುಗಳಲ್ಲ. ಇವುಗಳನ್ನು ಆಧುನಿಕ ವೈದ್ಯವಿಜ್ಞಾನ ತನ್ನಲ್ಲಿ ಸೇರಿಸಿಕೊಳ್ಳಲು ಸಾಧ್ಯವಿಲ್ಲ. ಅದನ್ನು ಬಿಟ್ಟಲ್ಲಿ ಮನುಜನನ್ನು ಅರ್ಥೈಸಲು ಕಠಿಣ, ಆಧುನಿಕ ವೈದ್ಯವಿಜ್ಞಾನದ ತೊಡಕಿರುವುದು ಇಲ್ಲಿಯೇ. ಆಯುರ್ವೇದ ಮತ್ತು ನಿಸರ್ಗೋಪಚಾರ ಇವುಗಳನ್ನು ತತ್ವಶಾಸ್ತ್ರದಲ್ಲಿರುವಂತೆಯೇ ಒಪ್ಪಿಕೊಂಡುಬಿಟ್ಟಿವೆ. ಅವುಗಳ ಕೆಲಸ ಕೊಂಚ ಹಗುರವಾಯ್ತು. ***ಇದರಿಂದ ನಿಸರ್ಗೋಪಚಾರ ಒಂದು ಕಲೆ, ತತ್ವಶಾಸ್ತ್ರ, ವಿಜ್ಞಾನ – ಈ ಮೂರರ ಸಂಗಮವಾಗಲು ಸಹಾಯವಾಯ್ತು.***

ಸುಲಭವಾಗಿ ಸರಳವಾಗಿ ಈ ಪದಗಳ ಗೊಂದಲದಾಚೆ ಇದನ್ನು ಅರಿಯಬೇಕೆಂದರೆ, ಎಳೆಯ ಪ್ರಾಣಿಗಳ ಚಲನೆಯಲ್ಲಿ, ಮಕ್ಕಳ ಕಣ್ಣಿನ ಮಿಂಚಿನಲ್ಲಿ, ಯುವತಿಯ ಅಳುಕು-ಬಳುಕಿನಲ್ಲಿ, ಯುವಕನ ತೋಳ್ಬಲದಲ್ಲಿ, ಮುದುಕನ ಜ್ಞಾನ ಹಾಗೂ ತಾಳ್ಮೆಯಲ್ಲಿ ಕಾಣುವ ಚೈತನ್ಯವೇ ಆರೋಗ್ಯ.

ಆರೋಗ್ಯ ಮನುಜನಿಗೆ ಒಂದು ಸಹಜ ಸ್ಥಿತಿ. ಇದು ನಿಸರ್ಗ, ಜೀವಿಗೆ ನೀಡಿರುವ ಆ ಜನ್ಮಸಿದ್ಧ ಹಕ್ಕು. ಆ ಹಕ್ಕನ್ನು ಚಲಾಯಿಸುವುದು ಹೇಗೆ? ಈ ಹಕ್ಕಿನ ಹಿಂದೆ ಕೆಲವು ಜವಾಬ್ದಾರಿಗಳು ಇರುತ್ತವೆ. ಎಲ್ಲಾ ಹಕ್ಕುಗಳಿಗೂ ಇದು ಸತ್ಯ. ಆ ಜವಾಬ್ದಾರಿಗಳನ್ನು ಸರಿಯಾಗಿ ನಡೆಸಿದರೆ ಆ ಹಕ್ಕು ತಾನೇ ತಾನಾಗಿಯೇ ದೊರೆಯುತ್ತದೆ. ಸರಿಯುತ್ತರ ಬರೆದ ವಿದ್ಯಾರ್ಥಿಗೆ ಉಪಾಧ್ಯಾಯರು ಅಂಕಗಳನ್ನು ಕೊಟ್ಟೇ ಕೊಡಬೇಕಾಗುತ್ತದೆ ಅಲ್ಲವೇ? ವಿದ್ಯಾರ್ಥಿ ಸರಿಯಾಗಿ ಬರೆಯಬೇಕಷ್ಟೆ. ಅದಕ್ಕೆ ಅವನಿಗೆ ವಿಷಯದ ಜ್ಞಾನ ಬೇಕಾಗುತ್ತದೆ. ಅಂತೆಯೇ ಆರೋಗ್ಯದ ಬಗ್ಗೆ ತಿಳಿವಳಿಕೆಯನ್ನು ಕೊಟ್ಟರೆ, ಅದನ್ನು ಅನುಸರಿಸಿ ತಮ್ಮ ಹಕ್ಕಾದ ಆರೋಗ್ಯವನ್ನು ಯಾರೂ ಪಡೆಯಬಹುದು. ಇದು ಸುಲಭವೂ ಸರಳವೂ ಆದ ನೇರ ಮಾರ್ಗ. ಹಾಗಲ್ಲದೇ ಬರೀ Prevention is better than cure ಎಂಬ ಮಂತ್ರವನ್ನು ಪಠಿಸುತ್ತಿದ್ದರೆ ಸಾಲದು. ಮಂತ್ರಕ್ಕೆ ಮಾವಿನಕಾಯಿ ಉದುರುವುದಿಲ್ಲ. Medicine Care ಗಿಂತ Health Careಗೆ ಮೊದಲ ಪ್ರಾಧಾನ್ಯತೆಯನ್ನು ಕೊಡಬೇಕಾದದ್ದು ಕರ್ತವ್ಯ. ಇದರಿಂದ ಕಾಲ, ಹಣ ಎಲ್ಲವೂ ಉಳಿಯುತ್ತದೆ.

ಹಿಂದೆ ಆಯುರ್ವೇದ ದಿನಚರಿ, ಋತುಚರಿ, ಸದ್ವೃತ್ತ ಎಂದು ಕರೆದಿರುವುದು ಈ ಆರೋಗ್ಯ ರಕ್ಷಣೆಯ ಉಪಾಯವೇ. ನಿಸರ್ಗಚಿಕಿತ್ಸೆಯು 'ನಿಸರ್ಗಜೀವನ' ಎಂದು ಕರೆದಿರುವುದು ಇದನ್ನೇ. ರಾಜಯೋಗವು ಯಮ-ನಿಯಮ ಎಂದು ಕರೆದಿರುವುದೂ ಸಹ ಇದೇ ಆಗಿದೆ. ಹಠಯೋಗವು 'ಷಟ್‌ಕ್ರಿಯೆ'ಗಳೆಂದು ಕರೆದಿರುವುದೂ ಇದನ್ನೇ. ಈಗ ಆಧುನಿಕ ವೈದ್ಯಪದ್ಧತಿಯು 'Change your Life Style' – 'ಜೀವನಪದ್ಧತಿ ತಿದ್ದಿಕೊಳ್ಳಿ' ಎಂದು ಘೋಷಿಸುತ್ತಿರುವುದೂ ಸಹ ಇದೇ ಆಗಿದೆ. ಅಂದರೆ ಎಲ್ಲಾ ಚಿಕಿತ್ಸಾ ಪದ್ಧತಿಗಳೂ ಸಹ ಆರೋಗ್ಯದ ರಕ್ಷಣೆಯೇ ಮೊದಲ ಉಪಾಯ ಎನ್ನುವುದನ್ನು ಒತ್ತಿ ಒತ್ತಿ ಹೇಳುತ್ತವೆ. ನಮ್ಮ ದಿನನಿತ್ಯದ ಆಹಾರ, ಆಚಾರ, ವಿಚಾರಗಳನ್ನು ನಿಸರ್ಗನಿಯಮಕ್ಕೆ ಹತ್ತಿರವಿರುವಂತೆ ನೋಡಿಕೊಂಡರೆ ಆರೋಗ್ಯ ತನಗೆ ತಾನೇ ಪ್ರಕಟವಾಗುತ್ತದೆ.

ವೇದಗಳಲ್ಲಿ ಜ್ಞಾನದ ನಂತರದ ಬೇಡಿಕೆಯೇ 'ಆಯುರಾರೋಗ್ಯಮೈಶ್ವರ್ಯಂ' ಎಂಬ ತ್ರಿವಳಿ. ಇವುಗಳಲ್ಲಿ ಒಂದನ್ನು ಬಿಟ್ಟು ಮತ್ತೆರಡಿದ್ದಲ್ಲಿ ಅವುಗಳಿದ್ದರೂ ಸಹ ಉಪಯೋಗವಿಲ್ಲ. ಅದೇ ಅವುಗಳ ಅಂಟಿನ ಗುಟ್ಟು. ಇಂದು ಬರೀ ಐಶ್ವರ್ಯಕ್ಕಾಗಿ ಹಾತೊರೆಯುತ್ತಿರುವ ನಾವು ಈ ಬಗ್ಗೆ ಚಿಂತಿಸಬೇಕಲ್ಲವೇ?

*(ಮುಂದುವರಿಯುತ್ತದೆ)* ★







# ವೃದ್ಧಾಪ್ಯದ ಸಮಸ್ಯೆಗಳು

– ಡಾ. ಎಸ್.ಎಸ್. ಪಾಟೀಲ
ಸಿದ್ಧರತ್ನ, ಧನ್ವಂತರಿ ಬಡಾವಣೆ,
ಗುಲಬರ್ಗಾ – 585 105.

*ಹುಟ್ಟಿದ್ದು ಬೆಳೆಯಲೆ ಬೇಕು*
*ಮೊಳೆತದ್ದು ಮಾಗಲೆ ಬೇಕು*
*ದುಡಿದು ದಣಿದು ಬಾಗಲೆಬೇಕು*
*ಕಳಿತದ್ದು ಕಳಚಲೆಬೇಕು*

– ದ.ರಾ. ಬೇಂದ್ರೆ

ಭೂಮಿಯ ಮೇಲಿರುವ ಸಕಲ ಸಜೀವ ಚರಾಚರಗಳು ಜನನ-ಬೆಳವಣಿಗೆ-ಅನುವಳಿಕೆ-ಮೃತ್ಯುವೆಂಬ ಕಾಲಚಕ್ರದಲ್ಲಿ ಪಯಣಿಸುವುದು ಅನಿವಾರ್ಯ. ಬೀಜ ಮೊಳಕೆಯೊಡೆದು ಸಸಿಯಾಗಿ ಮರವಾಗಿ ಹಸಿರುಚಿಗುರಾಗಿ ಕಂಗೊಳಿಸಿ ಒಣಗಿ ಕಡ್ಡಿಯಾಗಿ ಮರೆಯಾಗುತ್ತದೆ. ಅದರಂತೆ ಮಾನವ ಜನ್ಮ ಸಹ. ಜನಿಸಿ ಮಗುವಾಗಿ ಬಾಲ್ಯತನದ ಸೊಗಸು ತೋರಿ ಬೆಳೆಯುತ್ತ ಬಲಿಯುತ್ತ ಯೌವ್ವನದ ಧೀಮಾತು ಬೀರಿ ಮುಪ್ಪಿನತ್ತಸಾಗಿ ಮುಂದೊಂದುದಿನ ಮರೆಯಾಗು ಚಿತ್ರ ಕನಸಿನಂತೆ ಇಲ್ಲವೆ ಪರದೆ ಮೇಲೆ ನೋಡುವ ಚಲನಚಿತ್ರದಂತಲ್ಲವೆ?

ಬರಿ ಕಣ್ಣಿಗೆ ಕಾಣದ ಅತ್ಯಂತ ಸೂಕ್ಷ್ಮವಾದ ಜೋಡಿಗೆಟ್ಟು ಒಂದು ಸಾಲಿನ ೨೩ ವರ್ಣದಂಡ (ಕ್ರೋಮೋಸೋಮ್ಸ್)ಗಳನ್ನೊಳಗೊಂಡ ಪುರುಷ ವೀರ್ಯಾಣುವಿನ ಕಣವೊಂದು ಅಂತಹದೆ ಮಹಿಳೆಯ ಜೋಡಿಗೆಟ್ಟ ಅಂಡಾಣುವಿನ ಕಣದೊಂದಿಗೆ ಸೇರಿ ಒಂದಾಗಿ ಫಲವಂತಿಕೆ ಪಡೆದು ದ್ವಿಗುಣಗೊಳ್ಳುತ್ತ ಭ್ರೂಣವಾಗಿ, ಪಿಂಡ ಕೂಸಾಗಿ ಆಶ್ಚರ್ಯಕರವಾಗಿ ಬೆಳೆಯುತ್ತ ಜನನ ಪಡೆದು ಮಗುವಾಗಿ, ಮುಗ್ಧ ಮುದ್ದು ಬಾಲ್ಯತನದ ಸಂತಸನೀಡಿ ಅಗಾಧವೆನಿಸುವ ಶಕ್ತಿಯುತ ಮಾನವನಾಗಿ ಬಾಳಿ ದಿನಗಳೆದಂತೆ ಸೊರಗಿ ಕೊರಗಿ ನಿಷ್ಕ್ರಿಯೆಯತ್ತ ಸರಿದು ಒಂದು ದಿನ ಬಟ್ಟ ಬಯಲಾಗುವುದು ನಿಸರ್ಗದ ವಿಸ್ಮಮಗಳಲ್ಲೊಂದಾಗಿದೆ.

ಜೀವನದ ಪ್ರತಿಯೊಂದು ಹಂತವು ಆರೋಗ್ಯಕರವಾಗಿದ್ದರೆ ಬದುಕು ಸುಖಕರ. ಇಲ್ಲವಾದರೆ ಬವಣೆ ತಪ್ಪದು. ಬಾಲ್ಯದ ಮತ್ತು ಯೌವ್ವನದ ದೈಹಿಕ ಆರೋಗ್ಯ ಮಾನಸಿಕ ಸ್ವಾಸ್ಥ್ಯ ಮುಪ್ಪಿನಲ್ಲೂ ಇರುವಂತಾದರೆ ಇಡೀ ಜೀವನವೇ ಎಷ್ಟೊಂದು ಸುಂದರ ಸಂತಸಕರವಾಗಿರುತ್ತದೆ. ಆದರೆ ಮುಪ್ಪು ಎಲ್ಲರಿಗೂ ಎಲ್ಲ ತರಹದಲ್ಲಿ ಮುದ ನೀಡುವುದಿಲ್ಲವಲ್ಲ!

ವೃದ್ಧರು ಅಂದರೆ ಯಾರು? ಕಿಟೆಲ್ ನಿಘಂಟುವಿನಲ್ಲಿ – ಹೆಚ್ಚಾದ, ಬೆಳೆದ, ವಯಸ್ಸಾದ, ದೊಡ್ಡ, ಬುದ್ಧಿವಂತ, ಮುದುಕ (ಹರೆಯ ಹೋದವ) ಮರ್ಯಾದಾ ಪುರುಷ (ಸಾಧು, ಸಂತ) ಮತ್ತು ಸಾಂಬ್ರಾಣಿಯೆನ್ನುವ ಅರ್ಥಗಳನ್ನು "ವೃದ್ಧ" ಶಬ್ದಕ್ಕೆ ಕಾಣುತ್ತೇವೆ. ನಾವು ಇಲ್ಲಿ "ಮುದುಕ" ಅಂದರೆ ಹರೆಯ ಹೋದವ ಎನ್ನುವ ಅರ್ಥ ಬಳಸುವುದು ಸೂಕ್ತವೆನಿಸುತ್ತದೆ. ವಯಸ್ಸಿಗನುಗುಣವಾಗಿ ವೃದ್ಧತ್ವ ಪಡೆಯುವುದು ಸಹಜ. ವೃದ್ಧರು ಅಂದರೆ ಹಿರಿಯರು. ಹಿರಿತನ ಬರೀ ವಯಸ್ಸಿನಿಂದಲೇ ಪರಿಗಣಿಸಬೇಕೆಂದಿಲ್ಲ. ಬುದ್ಧಿ ಮತ್ತು ವಿದ್ವತ್ತಿನಿಂದ ಹಿರಿತನ ಸಿಗುತ್ತದೆ. ಹೀಗಾಗಿ ಎಲ್ಲ ವೃದ್ಧರು ಹಿರಿಯರಾಗಿರಬೇಕಿಲ್ಲವೆಂದು ಚೆನ್ನಬಸವಣ್ಣ ತನ್ನ ಒಂದು ವಚನದಲ್ಲಿ ಹೀಗೆ ಹೇಳಿದ್ದಾರೆ –

*ಅಜಕೋಟಿ ವರುಷದವರೆಲ್ಲ ಹಿರಿಯರೆ?*
*ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲ ಹಿರಿಯರೆ?*
*ನಡುಮುರಿದು, ಗೂಡುಗೂರಿ, ತಲೆನಡುಗಿ ನರೆತರೆ ಹೆಚ್ಚಿ*
*ಮತಿಗೆಟ್ಟು ಬಂದನಾಡಹೋಗಿ ಒಂಬತ್ತನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೆ?*
*ಅನುವನರಿದು ಘನನ ಬೆರೆಸಿ ಹಿರಿದು ಕಿರಿದೆಂಬ ಬೇಧವ ಮರೆದು*
*ಕೂಡಲ ಚೆನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ*
*ನಮ್ಮ ಮಹಾದೇವಿಯಕ್ಕಂಗಾಯಿತ್ತು*

ವಯಸ್ಸಿಗನುಗುಣವಾಗಿಯೆ ನಾವು ವೃದ್ಧಾಪ್ಯ ಪರಿಗಣಿಸುವುದಾದರೆ - ಮಾನವ ಬಾಳುವ ಸರಾಸರಿ ವಯಸ್ಸನ್ನು ಗಮನಿಸಬೇಕಾಗುತ್ತದೆ. ವೇದಗಳ ಕಾಲದಲ್ಲಿ ಬಹುಷಃ ನೂರುವರ್ಷ ಬಾಳುತ್ತಿರಬಹುದಾದುದರಿಂದ ೭೫ ವರ್ಷದ ನಂತರದವರಿಗೆ 'ವೃದ್ಧರು' ಎನ್ನುತ್ತಿದ್ದು ಅವರಿಗೆಲ್ಲ ಕಡ್ಡಾಯವಾಗಿ ಎಲ್ಲ ಕೆಲಸಗಳಿಂದ ನಿವೃತ್ತಿ (ಸನ್ಯಾಸ)

ಕೊಡುತ್ತಿದ್ದರಂತೆ. ಆದರೆ ಈಗ ನಾವು ಅಷ್ಟೊಂದು ದೀರ್ಘ ಬಾಳುತ್ತಿಲ್ಲ. ಭಾರತ ಸ್ವಾತಂತ್ರ್ಯ ಬಂದಾಗ ದೇಶದ ಜನಸಂಖ್ಯೆ ಸುಮಾರು ೩೦ ಕೋಟಿಯಷ್ಟಿದ್ದು ಜನರು ಬದುಕುವ ಸರಾಸರಿ ವಯಸ್ಸು ಸುಮಾರು ೪೦ ವರ್ಷವಿತ್ತು. ಆದರೆ ಇಂದು ಜನಸಂಖ್ಯೆ ಒಂದು ನೂರು ಕೋಟಿಗಿಂತ ಹೆಚ್ಚಾಗಿದೆ. ಜನರು ಬದುಕುವ ಸರಾಸರಿ ವಯಸ್ಸು ೬೪ ವರ್ಷಕ್ಕೆ ಏರಿದೆ. ವೈಜ್ಞಾನಿಕ ಪ್ರಗತಿ, ವೈದ್ಯಕೀಯ ಸೌಲಭ್ಯಗಳಿಂದಾಗಿ ಜನನದ ಪ್ರಮಾಣ ತಗ್ಗಿದರೂ ಸಾವಿನಸಂಖ್ಯೆ ಗಣನೀಯವಾಗಿ ಕಡಿಮೆಯಾಗಿ ಬದುಕುಳಿಯುವ ಸರಾಸರಿ ವಯಸ್ಸು ಹೆಚ್ಚಿದೆ. ಅದಕ್ಕಾಗಿಯೇ ಸರಕಾರವು ೬೦ ವರ್ಷ ವಯಸ್ಸಿನ ಸುತ್ತಮುತ್ತ ತನ್ನ ನೌಕರರಿಗೆ ನಿವೃತ್ತಿ ಕೊಡುತ್ತಿದೆ.

ಸಂಬಳಕ್ಕಾಗಿ ದುಡಿಯುವವರಿಗೆ ನಿವೃತ್ತಿ ಇದೆ. ಕೃಷಿಕರಿಗೆ ಹೊಲಗಳಲ್ಲಿ ದುಡಿಯುವ ಕೂಲಿಗಳಗೆ, ಹಮಾಲಿಗಳಿಗೆ ಧಾರ್ಮಿಕ ಮುಖಂಡರಿಗೆ, ರಾಜಕಾರಣಿಗಳಿಗೆ ನಿವೃತ್ತಿಯೆಂಬುದು ಇಲ್ಲವೇ ಇಲ್ಲ. ಹಾಗಂತ ಇವರು ವೃದ್ಧರಾಗುವುದೇ ಇಲ್ಲವೆನ್ನುವಂತಿಲ್ಲ! ಅಧಿಕಾರವಿಲ್ಲದ ವೃದ್ಧರಾಜಕಾರಣಿ ಅಧಿಕಾರ ಸಿಕ್ಕ ತಕ್ಷಣದಲ್ಲೇ ಯೌವ್ವನದ ಚೈತನ್ಯ ಪಡೆಯುತ್ತಾನೆ! ವಯಸ್ಸಿನ ಹಿರಿತನದ ಅನುಭವ ಸಮಾಜಕ್ಕಾಗಿ ಬೇಕು. ಆದರೆ ವಯಸ್ಸು ಹೆಚ್ಚಾದಂತೆ ಮಿದುಳಿನ ಚುರುಕುತನ ಕುಂಠಿತಗೊಂಡಂತೆ ಅರಿವು-ಮರೆವು ಮುಗ್ಗರಿಸುತ್ತಿರುವಂತೆ ಅನುಭವದ ಸಹಾಯ ಪಡೆಯುವುದು ನಿಲ್ಲುತ್ತದೆ.

ಇಂದು ವಿಶ್ವದಲ್ಲಿ ೬೦ ವರ್ಷಕ್ಕೆ ಮೇಲ್ಪಟ್ಟ ವೃದ್ಧರ ಸಂಖ್ಯೆ ಸುಮಾರು ೬೦ ಕೋಟಿ. ನಮ್ಮ ದೇಶದಲ್ಲಿ ಇವರ ಸಂಖ್ಯೆ ೫ ಕೋಟಿಗಿಂತ ಅಧಿಕವಾಗಿದೆ. ಈಗಿನ ಸ್ಥಿತಿ ಮುಂದುವರೆದರೆ ಬರುವ ೨೦ ವರ್ಷಗಳಲ್ಲಿ ವೃದ್ಧರ ಸಂಖ್ಯೆ ಸಧ್ಯದ ಜನಸಂಖ್ಯೆಯ ಅರ್ಧದಷ್ಟಾಗಬಹುದೆಂಬ ಒಂದು ಅಂದಾಜಿದೆ. ವಿಶ್ವದಲ್ಲೇ ಅತೀ ಹೆಚ್ಚು ವರ್ಷ ಬದುಕುವವರು ಜಪಾನಿಗರು. ಅವರು ಬದುಕುವ ಸರಾಸರಿ ಆಯುಷ್ಯ ೮೦ ವರ್ಷಗಳು. ಆರ್ಥಿಕವಾಗಿ ಸಾಮಾಜಿಕವಾಗಿ ಶೈಕ್ಷಣಿಕವಾಗಿ ಮುಂದುವರೆದ ದೇಶಗಳಲ್ಲಿ ವೃದ್ಧರ ಸಂಖ್ಯೆ ದಿನೆ ದಿನೆ ಬೆಳೆಯುತ್ತಿದೆ. ಅಲ್ಲಿ ವೃದ್ಧರ ಸಮಸ್ಯೆಗಳು ಅಲ್ಲಿಯ ಸರಕಾರಕ್ಕೆ ಕಾಡುತ್ತಿವೆ.

ನಮ್ಮಲ್ಲಿ ಮೊನ್ನೆ ಮೊನ್ನೆಯವರೆಗೆ ಅವಿಭಕ್ತ ಕುಟುಂಬ ಪದ್ಧತಿ ಇದ್ದುದರಿಂದ ಮುದುಕರಿಗೆ ಮಕ್ಕಳು, ಮೊಮ್ಮಕ್ಕಳ ಆಶ್ರಯ ಸಿಗುತ್ತಿತ್ತು. ಇಂದು ಬಿಡಿ ಕುಟುಂಬಗಳು ಹೆಚ್ಚಿ ಮುದುಕರು ಸುಖಕರ ಪರಿಸರದಲ್ಲಿ ಬಾಳುವುದು ಕಷ್ಟವಾಗುತ್ತಿದೆ. ನಮ್ಮಲ್ಲಿ ವೃದ್ಧಾಶ್ರಮಗಳ ಸಂಖ್ಯೆಯೂ ಬಹಳ ಕಡಿಮೆ. ಅದರಲ್ಲೂ ವೃದ್ಧೆಯರ ಸಮಸ್ಯೆ ಶೋಚನೀಯ. ಹೆಣ್ಣು ಮಕ್ಕಳು ಬೇಗ ವೃದ್ಧರಾಗುತ್ತಾರೆ. ಅವರ ಮುಟ್ಟು ಸ್ಥಗಿತಗೊಳ್ಳುವುದೇ ಕಾರಣ. ಗಂಡಸರು ವೃದ್ಧರಾಗುವುದು ತದನಂತರದಲ್ಲಿ ವೃದ್ಧ ಮುದುಕರು ವೃದ್ಧ ಮುದುಕಿಯರಿಗಿಂತ ಬೇಗ ಇಹಲೋಕ ತ್ಯಜಿಸುವುದರಿಂದ ವೃದ್ಧಾಪ್ಯದ ವಿಧವೆಯರ ಬಾಳು ಗೋಳು ಗೋಳು!

ಮುಪ್ಪಿನ ಲಕ್ಷಣಗಳನ್ನು ಬಸವಣ್ಣನವರು ತಮ್ಮ ವಚನದಲ್ಲಿ ಬಹಳ ಸೊಗಸಾಗಿ ಚಿತ್ರಿಸಿದ್ದಾರೆ.

*''ನೆರೆಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡು ಹೋಗುವ ಮುನ್ನ*
*ಹಲ್ಲು ಹೋಗಿ ಬೆನ್ನುಬಾಗಿ ಅನ್ಯರಿಗೆ ಹಂಗಾಗುವ ಮುನ್ನ*
*ಕಾಲಮೇಲೆ ಕೈಯನೂರಿ ಕೋಲು ಹಿಡಿಯುವ ಮುನ್ನ*
*ಮುಪ್ಪಿನಿಂದ ಒಪ್ಪ ಅಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ*
*ಪೂಜಿಸು ಕೂಡಲಸಂಗಮದೇವ''*

ಈ ವಚನದಲ್ಲಿ ಅತ್ಯಂತ ವೈಜ್ಞಾನಿಕ ಚಿಂತನವಿದೆ. ಮುಪ್ಪಿನ ಲಕ್ಷಣಗಳನ್ನೆಲ್ಲ ಹೇಳುತ್ತ ಹೇಳುತ್ತ ಆ ಲಕ್ಷಣಗಳು ಆವರಿಸಿ ಸಾವು ಅಪ್ಪುವುದಕ್ಕಿಂತ ಮೊದಲೇ ಅಂದರೆ ಬಾಲ್ಯ, ಯೌವನ ಮತ್ತು ಮಧ್ಯವಯಸ್ಸಿನಿಂದಲೇ ಮುಪ್ಪು ಮತ್ತು ಮೃತ್ಯು ಎದುರಿಸುವುದಕ್ಕಾಗಿ ಕೂಡಲಸಂಗಮನನ್ನು ಪೂಜಿಸು ಎಂದು ಹೇಳುತ್ತಾರೆ. ಪೂಜೆಯಿಂದ ಅಂತಃಕರಣಗಳ ವೃತ್ತಿ ಅಡಗುತ್ತದೆ. ಮನಸ್ಸು ನಿರ್ಮಲವಾಗಿರುತ್ತದೆ. ಅಹಂ ತೊಲಗುತ್ತದೆ ಚಿತ್ತ ಏಕಾಗ್ರತೆ ಪಡೆಯುತ್ತದೆ ಬುದ್ಧಿವರ್ಧಿಸಿ ಜ್ಞಾನಸಾಧನೆಗೆ ಅನುಕೂಲವಾಗುತ್ತದೆ. ''ಸ್ವಸ್ಥಮನವಿದ್ದಲ್ಲಿ ಸ್ವಸ್ಥ ದೇಹವು. ಹೀಗಾಗಿ ವೃದ್ಧಾಪ್ಯವನ್ನು ಚೈತನ್ಯದೊಂದಿಗೆ ಕಳೆಯಲು ಸಾಧ್ಯವಾಗುತ್ತದೆ. ಇದೇ ಭಾವದಲ್ಲಿ ಇನ್ನೋರ್ವ ಕವಿ ಹೇಳಿದ್ದು ಗಮನಿಸುವಂತಿದೆ–

*ಮುಪ್ಪುಬರಲಿಕೆ ದೇಹ ಸಡಲಿತು*
*ಕಪ್ಪು ಕೂದಲು ಬೆಳ್ಳಗಾದವು*
*ಒಪ್ಪ ಮೋರೆಯು ಚಿಪ್ಪಿನಂತಾಯ್ತಿನ್ನ ಜಗದೊಳಗೆ*
*ಬಪ್ಪ ಮುದುಕನು ಬಡಿಗೆ ಹಿಡಿಯುತ*
*ಅಪ್ಪಿದಾಶೆಯ ಪಿಂಡ ಚೆಲ್ಲುತ*
*ತಪ್ಪಿ ಪೋಪುದು ದೇಹ ಸಿದ್ಧಾರೂಢರನು ಭಜಿಸು*





ವೈಜ್ಞಾನಿಕವಾಗಿ ಗಮನಿಸಿದಾಗ ಮುಪ್ಪಿನ ಹಲವಾರು ಲಕ್ಷಣಗಳು ಕಣ್ಣೆದುರಿಗೆ ಸುಳಿಯುತ್ತವೆ. ಈ ಎಲ್ಲ ಲಕ್ಷಣಗಳು ಎಲ್ಲ ವೃದ್ಧರಲ್ಲಿ ಕಂಡುಬರುತ್ತವೆಯೆಂದಿಲ್ಲ. ತಲೆಬೋಳಾಗುತ್ತದೆ. ಕೂದಲು ಬೆಳ್ಳಗಾಗುತ್ತವೆ. ಹಣೆಯ ಮೇಲೆ ಗೆರೆಗಳು ಕಾಣಿಸುತ್ತವೆ, ಕಣ್ಣು ಕುಳಿ ಬೀಳುತ್ತವೆ, ತಲೆನಡುಗುತ್ತದೆ, ಬೆನ್ನು ಬಾಗುತ್ತದೆ, ಕೀಲುಗಳು ಗಟ್ಟಿಗೊಂಡು ನಡೆಯುವುದು ಕಷ್ಟಕರವಾಗುತ್ತದೆ. ಕುಳಿತುಕೊಳ್ಳಲು, ಕುಳಿತವರು ಮೇಲೇಳಲು ತೊಂದರೆಯಾಗುತ್ತದೆ. ದೃಷ್ಟಿ ಮಂದವಾಗುತ್ತದೆ, ಕಿವಿ ಸರಿ ಕೇಳುವುದಿಲ್ಲ ನಾಲಿಗೆ ರುಚಿಸುವುದಿಲ್ಲ. ವಾಸನೆಗಳು ಚೆನ್ನಾಗಿ ಗೊತ್ತಾಗುವುದಿಲ್ಲ. ಚರ್ಮ ಸುಕ್ಕುಗಟ್ಟುತ್ತದೆ. ಸ್ನಾಯುಗಳು ಬಲಕಳಕೊಂಡು ಸಡಿಲವಾಗಿ ಜೋತಾಡುತ್ತದೆ. ಮೂಳೆಗಳು ಮೆತ್ತಗಾಗಿ ಬಾಗಿ ಅಂದಗೆಡುತ್ತವೆ. ಇವಲ್ಲದೆ ಜೀವನಾವಷ್ಯಕವಾದ ಒಳಾಂಗಗಳಲ್ಲೂ ಬದಲಾವಣೆಗಳು ಕಾಣಿಸಿಕೊಳ್ಳುತ್ತವೆ. ಹೃದಯ ಬಳಲಿ ದೊಡ್ಡಗಾತ್ರದ್ದಾಗುತ್ತದೆ. ಪುಪ್ಪುಸಗಳು ಬಲಹೀನವಾಗಿ ಉಸಿರಾಟದ ಮೊತ್ತ ಕುಂಠಿತಗೊಳ್ಳುತ್ತದೆ ಯಕೃತ್ತು, ಗುಲ್ಮ, ಮೇದೋಜೀರಕ ಗ್ರಂಥಿಗಳು ದಣಿದು ಪಚನಕ್ರಿಯೆ ಸೀಮಿತಗೊಳ್ಳುತ್ತದೆ. ಮೂತ್ರಪಿಂಡಗಳು ದಣಿದು ಅವುಗಳ ಕಾರ್ಯದಲ್ಲಿ ಹೀನತೆಯುಂಟಾಗುತ್ತದೆ. ಶುಕ್ಲಗ್ರಂಥಿ (ಪ್ರೊಸ್ಟೇಟ್) ದೊಡ್ಡದಾಗಿ ಗಂಡಸರಲ್ಲಿ ಮೂತ್ರಕಟ್ಟುತ್ತದೆ. ವೃಷಣ, ಅಂಡಾಶಯಗಳ ಕಾರ್ಯದ ಚುರುಕುತನವಿಲ್ಲವಾಗಿ ಹುರುಪುತನ ಅಳಿಯುತ್ತ ಸಾಗುತ್ತದೆ. ಮಿದುಳಿನ ಕಣಗಳ ಅನುವಳಿಕೆ ಪ್ರಾರಂಭಿಸಿ ಅಂಗಗಳ, ಭಾವನೆಗಳ ಮತ್ತು ಬುದ್ಧಿಯ ಮೇಲಿರುವ ಹಿಡಿತ ಸಡಿಲಗೊಂಡು – ಒಂದನಾಡಹೋಗಿ ಒಂಬತ್ತನಾಡುವ ಅಜ್ಞಾನಿಯೆನಿಸಿಕೊಳ್ಳುವಂತಾಗುತ್ತದೆ. ಇದೆಲ್ಲ ಯಾಕೆ ಹೀಗಾಗುವುದು? ವಿಜ್ಞಾನಿಗಳು ಸಂಶೋಧನೆಗಳನ್ನು ಸತತ ನಡೆಸುತ್ತಿದ್ದು ಅಂತಿಮವಾಗಿ ಏನನ್ನೂ ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗದಿದ್ದರೂ ಕೆಲವೊಂದು ಬದಲಾವಣೆಗಳು ಇದಕ್ಕೆ ಕಾರಣವೆಂದು ತಿಳಿದಿದ್ದಾರೆ.

ದೈಹಿಕ ಬೆಳವಣಿಗೆಯಾಗ, ಬೌದ್ಧಿಕ ಬೆಳವಣಿಗೆಯಾಗಲಿ ಅವು ಮುಖ್ಯವಾಗಿ ಆನುವಂಶಿಕವಾಗಿ ಪಡೆದಿರುವಂತಹುಗಳು. ಪರಿಸರ ಮತ್ತು ಪ್ರಯತ್ನದಿಂದಾಗಿ ಕೆಲವು ಪ್ರಮುಖ ಬದಲಾವಣೆಗಳನ್ನು ತರಬಹುದು. ವರ್ಣದಂಡ (ಕ್ರೋಮೋಸೋಮ್ಸ್)ಗಳು ಡಿ.ಎನ್.ಎ. ಹೊಂದಿರುತ್ತವೆ. ಡಿ.ಎನ್.ಎ. ಕ್ರಿಯಾತ್ಮಕವಾಗಿರಬೇಕಾದರೆ/ವಾಗುಳಿಯಬೇಕಾದರೆ ಅವುಗಳಿಗೆ ಪ್ರೋಟೀನ್ ಬೇಕಾಗುತ್ತದೆ. ವಯಸ್ಸಾದಂತೆ ಆ ಪ್ರೋಟೀನಿನಲ್ಲಿ ವ್ಯತ್ಯಯ ಉಂಟಾಗುತ್ತದೆ. ಪ್ರತಿ ಜೀವಕೋಶಗಳಿಗೆ ಮೂಲ ಆಧಾರವಾಗಿರುವುದು ಎಡಿನೋಸಿನ್ ಟ್ರೈಫಾಸಫೇಟ್; ಮುಪ್ಪಿನೊಂದಿಗೆ ಇದರ ಸಾಮರ್ಥ್ಯವೂ ಇಳಿಮುಖವಾಗುತ್ತದೆ ಎನ್ನುವುದರ ಮೇಲೆ ನಮ್ಮ ಮುಪ್ಪಿನಲುಂಟಾಗುವ ಬದಲಾವಣೆಗಳು ಅವಲಂಭಿಸಿರುತ್ತದೆ. ಚಿಂತೆ (Stress) ಮುಪ್ಪನ್ನು ಬೇಗ ತರುತ್ತದೆ. ಜಿಡ್ಡು ಪದಾರ್ಥವನ್ನು ಆಹಾರದಲ್ಲಿ ಹೆಚ್ಚು ಬಳಸುತ್ತಿದ್ದು ಸಾಕಷ್ಟು ಶಾರೀರಿಕ ಶ್ರಮವಾಗಲಿ, ವ್ಯಾಯಾಮವಾಗಲಿ ಇಲ್ಲವೆ ವಿಶ್ರಾಂತಿಯಾಗಲಿ ನಿಯಮಿತವಾಗಿಲ್ಲದಿದ್ದರೆ ರಕ್ತದಲ್ಲಿ ಕೊಬ್ಬು (ಕೊಲೆಸ್ಟ್ರಾಲ್) ಹೆಚ್ಚಿ ರಕ್ತನಾಳಗಳ ಆಳ ಕಡಿಮೆಯಾಗಿ ರಕ್ತದೊತ್ತಡ ಏರುತ್ತದೆ. ಈ ಬ್ಲಡ್ ಪ್ರೆಶರ್ ಹೆಚ್ಚಾಗಿ ಅತೀ ಚಿಕ್ಕ ರಕ್ತನಾಳಗಳಾದ 'ಲೋಮನಾಳಗಳು' ಸೀಳಿ ಅಲ್ಲಲ್ಲಿ ಆಯಾ ಅಂಗಗಳಲ್ಲಿ ರಕ್ತವೆಸರುತ್ತದೆ. ಹೀಗೆ ಮಿದುಳಿನಲ್ಲಿ ರಕ್ತ ವಸರುವುದರಿಂದ ಅಲ್ಪ ಪ್ರಮಾಣದಲ್ಲಿದ್ದರೆ ಲಕ್ವಾ ಪರಿಣಾಮ: ಹೆಚ್ಚು ಪ್ರಮಾಣದಲ್ಲಿದ್ದರೆ ಪ್ರಾಣಪಾಯ ಅನುಭವಿಸಬೇಕಾಗುತ್ತದೆ. ಏರುರಕ್ತದೊತ್ತಡದ ದುಷ್ಪರಿಣಾಮ ಎಲ್ಲ ಒಳಾಂಗಗಳಲ್ಲೂ ಕಾಣಿಸಿಕೊಳ್ಳುತ್ತದೆ. ಅದರೊಂದಿಗೆ ಮಧುಮೇಹ ಸೇರಿಸಿಕೊಳ್ಳುವ ಸಾಧ್ಯತೆ ಇರುತ್ತದೆ.

ವೃದ್ಧಾಪ್ಯದಲ್ಲಿ ಹೃದಯ ಬಳಲಿಕೆಯಿಂದ ಹೃದಯವು ದೊಡ್ಡದಾಗಿ ತನ್ನ ಕಾರ್ಯದಲ್ಲಿ ಚುರುಕುತನ ಕಳೆದುಕೊಳ್ಳುತ್ತದೆ. ಪುಪ್ಪುಸಗಳಿಂದ ಮತ್ತು ಪುಪ್ಪುಸಗಳಿಗೆ ರಕ್ತಸಂಚಾರದಲ್ಲಿ ವ್ಯತ್ಯಯ ಉಂಟಾಗಿ ಹೃದಯ ವೈಫಲ್ಯತೆ ಫಲಿಸುತ್ತದೆ. ಹೃದಯಾಘಾತ ಸಂಭವಿಸುವ ಅವಕಾಶ ವಿಪುಲ. ಮೂತ್ರಪಿಂಡಗಳೂ ವಿಫಲಗೊಳ್ಳುವುದಿದೆ. ಅಂಥ ಸಂದರ್ಭದಲ್ಲಿ ಡಯಾಲಿಸಿಸ್‌ಗೆ ಮೊರೆ ಹೋಗಲೇ ಬೇಕಾಗುತ್ತದೆ.

ಮುಪ್ಪಿನಲ್ಲಿ ಮೂಳೆಗಳೂ ಮೆತ್ತಗಾಗುತ್ತದೆ. ಮೂಳೆಯ ಆಳದಲ್ಲಿಯ ಮಜ್ಜೆ ಪ್ರಮಾಣ ಕಡಿಮೆಯಾಗಿ ಕೆಂಪುರಕ್ತಕಣಗಳ ಜನನ ಕುಂಠಿತಗೊಳ್ಳುತ್ತದೆ. ಮೂಳೆಯೊಳಗಿನ ಕ್ಯಾಲ್ಸಿಯಂ ಮತ್ತು ಪ್ರೋಟೀನ್ ಅಂಶ ಇಳಿದು ಟೊಳ್ಳು ಟೊಳ್ಳಾಗುತ್ತವೆ. ಟೊಳ್ಳಾದ ಮೂಳೆ ಅತ್ಯಲ್ಪ ಪೆಟ್ಟಿನಿಂದಾಗಿ ಮುರಿಯುತ್ತವೆ. ತೊಡೆಯಲುವು ಚಪ್ಪೆ ಭಾಗದಲ್ಲಿ ಮುರಿದಿದ್ದೇ ಆದರೆ ಇಲ್ಲವೆ ಬೆನ್ನಿನ ಭಾಗದ ಕಶೇರು (ವರ್ಟೀಬ್ರಾ) ಜಬ್ಬುಜಡಿದಂತಾಗಿ ಬೆನ್ನುಹುರಿಯ ಮೇಲೆ ಒತ್ತಡ ಬಿದ್ದು ಲಕ್ವ ಉಂಟಾದರೆ ಅವರು ಚೇತರಿಸಿಕೊಳ್ಳುವುದು ಕಷ್ಟಸಾಧ್ಯ.

ಹೀಗೆ ಒಂದೊಂದೇ ಅವಯವಗಳು ಅನುವಳಿಕೆಗೊಳಗಾಗಿ ತಮ್ಮ ಚುರುಕುತನ ಕಳಕೊಳ್ಳುತ್ತವೆ. ಅನುವಳಿಕೆ ಮೆದುಳಿನಲ್ಲಿ ಪ್ರಾರಂಭವಾದರೆ ಆ ವ್ಯಕ್ತಿಗೆ ಮರೆವು ಪ್ರಾರಂಭವಾಗುತ್ತದೆ. ಮಕ್ಕಳಂತಾಗುತ್ತಾರೆ. ಹುಚ್ಚರಂತಾಡಬಹುದು ಕೊನೆ ಕೊನೆಗೆ ಸಂಪೂರ್ಣ ಪ್ರಜ್ಞೆಕಳಕೊಂಡು ಸಸ್ಯಾದಿಗಳಂತೆ ಬಾಳಬೇಕಾಗಬಹುದು.

ನೆನಪಿಡಿ, ಈ ಎಲ್ಲ ಸಮಸ್ಯೆ ವೃದ್ಧರೆಲ್ಲರಲ್ಲಿಯೂ ಕಾಣಿಸಿಕೊಳ್ಳುವದಿಲ್ಲ. ಕೆಲವರಲ್ಲಿ ಕೆಲವು ಸಮಸ್ಯೆಗಳು ಉದ್ಭವಿಸಬಹುದು. ವೃದ್ಧಾಪ್ಯದ ಸಮಸ್ಯೆಗಳನ್ನು ನಿಯಂತ್ರಿಸಲು, ತಡೆಗಟ್ಟಲು ಸಾಧ್ಯವಿಲ್ಲವೆ? ಎಂದು ಹಂಬಲಿಸುವುದು ಸಹಜ. ಸಮಯ ಸರಿಯುವುದನ್ನು ತಡೆಗಟ್ಟುವುದು ಸಾಧ್ಯವಿಲ್ಲ ವೃದ್ಧಾಪ್ಯ ಅನಿವಾರ್ಯ! ಆದರೆ ವೃದ್ಧಾಪ್ಯದಲ್ಲಿ ದೈಹಿಕ ಮತ್ತು ಮಾನಸಿಕ ಆರೋಗ್ಯ ಕಾಪಾಡಿಕೊಳ್ಳುವುದು ಕೆಲವು ನಿಯಮಗಳನ್ನು ಪಾಲಿಸಿದರೆ ಸಾಧ್ಯವಾಗುತ್ತದೆ.

ಮೊದಲಿನಿಂದಲೇ ಆರೋಗ್ಯ ಕಾಪಾಡಿಕೊಳ್ಳುವತ್ತ ಗಮನ ಹರಿಸಬೇಕು ಸಮತೋಲನದ ಆಹಾರ ತಕ್ಕ ಪ್ರಮಾಣದಲ್ಲಿ ಸೇವಿಸುತ್ತಿರಬೇಕು. ಜಿಡ್ಡು ಪದಾರ್ಥಗಳ ಬಳಕೆ ಅತ್ಯಲ್ಪವಾಗಿರಬೇಕು. ನಿಯಮಿತ ವ್ಯಾಯಾಮ ಮಾಡುತ್ತಿರಬೇಕು. ಬೆಳಗಿನ ಬಿರುಸಿನ ನಡುಗೆ ಉತ್ತಮ ವ್ಯಾಯಾಮ ಬಳಲಿಕೆಗೆಡೆಕೊಡದೆ ಸಾಕಷ್ಟು ವಿಶ್ರಾಂತಿ ಪಡೆಯುತ್ತಿರಬೇಕು. ಸೋಮಾರಿಗಳಾಗಿರಬಾರದು. ತಂಬಾಕುಸೇವನೆ, ಮದ್ಯಪಾನದಂತಹ ದುಶ್ಚಟಗಳಿಂದ ದೂರವಿರಬೇಕು. ಸದಾ ಒಳ್ಳೆಯದನ್ನೇ ಬಯಸುತ್ತಿರಬೇಕು; ಮನಸ್ಸಿನ, ಚಿತ್ತದ ಶಾಂತತೆ ಕಾಪಾಡಿಕೊಂಡಿರಬೇಕು. ಮುಂಬರುವ ಮುಪ್ಪನ್ನು ಸಂತೋಷದಿಂದ ಸ್ವೀಕರಿಸಲು ಸಿದ್ಧನಾಗಿರಬೇಕು.

ವೃದ್ಧಾಪ್ಯದಲ್ಲಿ ತನ್ನ ಇತಿಮಿತಿ ತಿಳಿದುಕೊಂಡಿರಬೇಕು. ಸಾಧ್ಯವಾಗುವವರೆಗೆ ಮನೆಯವರಿಗೆ, ಸಮಾಜಕ್ಕೆ ಉಪಯೋಗವಾಗುವಂತಿರಬೇಕು ತಲೆಮಾರಿನ ಅಂತರ ಅರಿತು ತನ್ನ ಹುಚ್ಚುಹಟಬಿಟ್ಟಿರಬೇಕು. ಬಯಸಿದವರಿಗೆ ತನ್ನ ಅನುಭವ ದೂಟಬಡಿಸಬೇಕು. ಒಂಟಿತನದಿಂದ ದೂರವಿದ್ದು ಪೂಜೆ, ಧ್ಯಾನಗಳಲ್ಲಿ ನಿರತನಾಗುತ್ತ ಎಲ್ಲರೊಂದಿಗೆ ಬೆರೆತು ನಗುತ್ತ ನಗಿಸುತ್ತ ತನ್ನ ಸುತ್ತಲಿನ ವಾತಾವರಣ ಸದಾ ಚೈತನ್ಯವಾಗಿಡುತ್ತಿದ್ದರೆ ಮುಪ್ಪು ಕಷ್ಟದಾಯಕವೆನಿಸುವುದಿಲ್ಲ. ವೃದ್ಧಾಶ್ರಮಗಳಲ್ಲುಳಿದರೆ ಅಲ್ಲಿಯೂ ಅನಿವಾರ್ಯವಾಗಿ ಸಂತಸದ ವಾತಾವರಣ ನಿರ್ಮಿಸಿಕೊಳ್ಳಬೇಕು. ಇದೆಲ್ಲ ಹೇಳುವಷ್ಟು ಸರಳವಲ್ಲ ಆದರೆ ಆ ಪ್ರಯತ್ನಮಾಡುವುದು ಖಚಿತವಾಗಿ ಹಿತಕಾರಿ. ಸಿದ್ಧಯ್ಯ ಪುರಾಣಿಕರು ಹೇಳಿದಂತೆ –

ಸ್ವಸ್ಥ ದೇಹದಿ ಸ್ವಸ್ಥ ಮನವು ನಿಜ, ಅಂತೆಯೇ
ಸ್ವಸ್ಥಮನವಿರುವಲ್ಲಿ ಸ್ವಸ್ಥದೇಹ
ಅಸ್ತವ್ಯಸ್ತವೋ ಮನವು ಸ್ವಸ್ಥವಾಗದು ತನುವು
"ಸ್ವಸ್ತಿ" ಸುಮನದಿಂದ ಮರುಳಸಿದ್ಧ.

★

## ೭ನೆಯ ರಾಜ್ಯ ಮಟ್ಟದ ಅಂಚೆ-ಕುಂಚ ಸ್ಪರ್ಧೆಗೆ ಆಹ್ವಾನ

ಶ್ರೀಕ್ಷೇತ್ರ ಧರ್ಮಸ್ಥಳದ ಶಾಂತಿವನ ಟ್ರಸ್ಟ್(ರಿ)ನ ಆಶ್ರಯದಲ್ಲಿ ೭ನೆಯ ರಾಜ್ಯಮಟ್ಟದ, ಅಂಚೆಕಾರ್ಡಿನ ಗಾತ್ರದ ಡ್ರಾಯಿಂಗ್ ಶೀಟ್, ಸ್ಪರ್ಧಾ ಕಾರ್ಡ್ ಅಥವಾ ಅಂಚೆ ಕಾರ್ಡ್ ಮೂಲಕ ಚಿತ್ರ ಬಿಡಿಸುವ ಸ್ಪರ್ಧೆಯನ್ನು ಸಂಯೋಜಿಸಲಾಗಿದೆ. ಈ ಸ್ಪರ್ಧೆಯು ಪ್ರಾಥಮಿಕ ಶಾಲಾ, ಪ್ರೌಢಶಾಲಾ, ಕಾಲೇಜು ಹಾಗೂ ಸಾರ್ವಜನಿಕ ವಿಭಾಗ ಹೀಗೆ ನಾಲ್ಕು ವಿಭಾಗಗಳಲ್ಲಿ ಪ್ರತ್ಯೇಕವಾಗಿ ನಡೆಯಲಿದೆ. ಸ್ಪರ್ಧಿಗಳಿಗೆ ನೀಡಿರುವ ವಿಷಯ : ಐಚ್ಛಿಕ ವಿಷಯ (ತಮಗೆ ಇಷ್ಟವಾದ ಯಾವುದೇ ವಿಷಯವನ್ನು ಆಯ್ದು ಚಿತ್ರ ಬಿಡಿಸಿ ಕಳುಹಿಸಬಹುದು). ಪ್ರತಿವಿಭಾಗಕ್ಕೆ ೩ ಆಕರ್ಷಕ ಬಹುಮಾನವಿದೆ. ವಿಷಯದ ಕುರಿತಾಗಿ ಪೆನ್ಸಿಲ್, ಜಲವರ್ಣ, ಇಂಡಿಯನ್ ಇಂಕ್ ಹಾಗೂ ವಿವಿಧ ರೀತಿಯಿಂದ ಚಿತ್ರಗಳನ್ನು ರಚಿಸಬಹುದಾಗಿದೆ. ಒಬ್ಬರು ಎಷ್ಟು ಚಿತ್ರಗಳನ್ನು ಬೇಕಾದರೂ ಬರೆದು ಕಳುಹಿಸಬಹುದು. ವಿದ್ಯಾರ್ಥಿಗಳಾಗಿದ್ದಲ್ಲಿ ವಿದ್ಯಾಲಯದ ಮುದ್ರೆ ಹಾಗೂ ಶಾಲಾ ಕಾಲೇಜಿನ ಮುಖ್ಯಸ್ಥರ ಸಹಿಯೊಂದಿಗೆ ದೃಢೀಕರಿಸಿ ಕಳುಹಿಸಬೇಕು. ಸ್ಪರ್ಧಿಗಳು ಚಿತ್ರವನ್ನು ಪೂರ್ಣವಿಳಾಸದೊಂದಿಗೆ (ದೂರವಾಣಿ ನಂ ಸಹಿತ) ದಿನಾಂಕ ೩೦.೧೧.೨೦೦೫ ರೊಳಗಾಗಿ ನಿರ್ದೇಶಕರು, ಅಂಚೆ-ಕುಂಚ ವಿಭಾಗ ಶ್ರೀ ಧ.ಮಂ. ಯೋಗ ಮತ್ತು ನೈತಿಕ ಶಿಕ್ಷಣ ಯೋಜನೆ, ಶಾಂತಿವನ, ಶ್ರೀಕ್ಷೇತ್ರ ಧರ್ಮಸ್ಥಳ – ೫೭೪೨೧೬ ದಕ್ಷಿಣ ಕನ್ನಡ ಜಿಲ್ಲೆ ಈ ವಿಳಾಸಕ್ಕೆ ಕಳುಹಿಸಬೇಕೆಂದು ಪ್ರಕಟಣೆಯಲ್ಲಿ ಕೋರಲಾಗಿದೆ.





# ನೀವು ಸರಿಯಾಗಿ ಕುಳಿತಿದ್ದೀರಾ

– ಡಾ. ಸಿ.ವಿ. ಹಿರೇಮಠ
ರಾಣಿಬೆನ್ನೂರು.

ಅರೆ! ಇದೇನಿದು, ನಾವು ಕೂರುವುದು ನಮಗೆ ಗೊತ್ತಿಲ್ಲವೆ? ಸರಿಯಾಗಿ ಕೂರದಿದ್ದರೆ ಕುಳಿತುಕೊಳ್ಳಲು ಹೇಗೆ ಸಾಧ್ಯವಾಗುವುದು?

ನಾವು ಎಷ್ಟೇ ಸರಿಯಾಗಿ ಕುಳಿತುಕೊಂಡಿದ್ದೇವೆಂದರೂ ನಮ್ಮ ಬೆನ್ನು ಮೂಳೆಗೆ ಭಾರ ಬೀಳದಂತೆ ಅನುದಿನವೂ ಬೆನ್ನು ನೋವು, ಸೊಂಟನೋವು ಎಂದು ನರಳದಂತೆ ಸುಖವಾಗಿ ಬದುಕಬೇಕೆಂದರೆ ಸರಿಯಾಗಿ ಕೂರುವುದು ಹೇಗೆಂದು ಅರಿಯುವ ಬನ್ನಿ !

ಜಗತ್ತಿನ ಶೇಕಡಾ ೮೦ರಷ್ಟು ಜನರು ಒಂದಿಲ್ಲೊಂದು ಸಮಯದಲ್ಲಿ ಬೆನ್ನು ನೋವು, ಸೊಂಟ ನೋವಿನಿಂದ ನರಳುತ್ತಾರೆ. ವ್ಯಾಯಾಮಗಳ ಮೂಲಕ ಬೆನ್ನನೋವನ್ನು ತಡೆಗಟ್ಟುವುದು ಒಂದು ಬಗೆಯಾದರೆ ನಾವು ಕುಳಿತುಕೊಳ್ಳುವ ಪದ್ಧತಿಯನ್ನು ಪರಾಮರ್ಶಿಸಿ, ಸರಿಯಾದ ಸ್ಥಿತಿಯಲ್ಲಿ ಕೂರುವ ಅಭ್ಯಾಸ ಮಾಡಿದರೆ ಅದರಿಂದಲೂ ಬೆನ್ನು ನೋವನ್ನು ಸಾಕಷ್ಟು ತಡೆಯಬಹುದು.

ಬೆನ್ನು ನೋವಿಗೆ ಪ್ರಮುಖ ಕಾರಣವೆಂದರೆ ನಿಶ್ಚಲ ಸ್ಥಿತಿ. ಆಧುನಿಕತೆ ಅನುಕೂಲಗಳನ್ನು ಅನುವು ಮಾಡಿಕೊಟ್ಟಂತೆ ಕೈ, ಕಾಲು, ಬೆನ್ನಿಗೆ ಸರಿಯಾದ ಸ್ಥಿತಿಯಲ್ಲಿ ಕಾರ್ಯಭಾರ ಬೀಳದೇ ಅಂಗಾಂಗಗಳ ಕೆಲಭಾಗಗಳು ಜಿಡ್ಡುಗಟ್ಟುತ್ತವೆ. ಸಹಸ್ರಾರು ವರ್ಷಗಳಿಂದಲೂ ಜಗತ್ತಿನಲ್ಲಿ ಏನೆಲ್ಲ ಬದಲಾವಣೆಗಳಾದರೂ ಮಾನವನ ಬುದ್ಧಿ, ವಿಚಾರಶಕ್ತಿಗಳು ಮೊನಚುಗೊಂಡರೂ ದೇಹಮಾತ್ರ ಬಹುಪಾಲು ಅಂದಿನಂತೆಯೇ ಇದೆ. ದೇಹ ಅಂದಿನಂತಿದ್ದರೂ ಜೀವನಶೈಲಿ ಮಾತ್ರ ಇಂದಿನಂತಿದೆ. ಚಲನಶೀಲತೆ ಕಡಿಮೆಯಾದಂತೆಲ್ಲ ಬೆನ್ನುಹುರಿ, ಸೊಂಟ ನೋವು ಹೆಚ್ಚುತ್ತಲಿದೆ.

ಸರಿಯಾದ ಸ್ಥಿತಿಯಲ್ಲಿ ಕುಳಿತುಕೊಳ್ಳುವುದೆಂದರೆ ಏನು? ಎಷ್ಟು ಸುದೀರ್ಘ ಹೊತ್ತು ನಮ್ಮ ದೇಹವು ನಮಗೆ ಆಯಾಸ, ಬಾಧೆ ಇಲ್ಲದಂತೆ ಕುಳಿತುಕೊಳ್ಳಲು ಸಹಕರಿಸುವುದೋ ಅದಾಗಿದೆ. ಕೆಲವು ಬಾರಿ ವಿಷಮ ಆಸನ-ಸ್ಥಿತಿಯಲ್ಲಿ ದೀರ್ಘಕಾಲ ಕುಳಿತುಕೊಳ್ಳುವುದರಿಂದ ತತ್‌ಕ್ಷಣಕ್ಕೆ ಆಯಾಸವಾಗಲಿ, ಬಾಧೆಯಾಗಲಿ ದೇಹಕ್ಕುಂಟಾಗದಿದ್ದರೂ ಕಾಲಕ್ರಮೇಣ ಅದರ ಪರಿಣಾಮ ದೇಹದ ಮೇಲೆ ಉಂಟಾಗುತ್ತದೆ. ತತ್ಫಲವಾಗಿ ಬೆನ್ನು ನೋವು, ಸೊಂಟನೋವು ಪ್ರಾರಂಭವಾಗುತ್ತವೆ.

ದೇಹದ ಸ್ಥಿತಿಯ ಈ ನೋವುಗಳ ಹಿನ್ನೆಲೆಗೆ ಮೂಲಕಾರಣವಾಗಿರುತ್ತದೆ. ಅತಿಸ್ಥೌಲ್ಯವು, ವಿಶೇಷವಾಗಿ ಡೊಳ್ಳುಹೊಟ್ಟೆಯು ಅಧಿಕ ಭಾರವನ್ನು ಒದಗಿಸಿ ಬೆನ್ನ ರೇಖೆಯನ್ನು ಬದಲಾಯಿಸುತ್ತದೆ. ಇದರಿಂದಾಗಿ ಗುರುತ್ವಾಕರ್ಷಣ ಶಕ್ತಿಯ ಸಮತೆ ಭಿನ್ನವಾಗುತ್ತದೆ. ಈ ಸಮತೋಲವು ಮಾಂಸ-ಪೇಶಿಗಳ ಮೇಲೆ ಸದಾಕಾಲ ಒತ್ತಡ ಹಾಕುವುದರಿಂದಾಗಿ ಬೆನ್ನುನೋವು ಬರುವುದು ಸಾಮಾನ್ಯವಾಗುತ್ತದೆ. ಜೀವನದಲ್ಲಿ ಬೆನ್ನು, ಸೊಂಟನೋವು ಬಾರದೆಂದು ಬಯಸುವವರು ತಮ್ಮ ದೇಹದ ತೂಕ- ಎತ್ತರಗಳನ್ನು ನಿರಂತರವಾಗಿ ಸಮತೋಲದಲ್ಲಿ ಕಾಯ್ದುಕೊಳ್ಳಬೇಕು. ಬಹುತೇಕ ಜನರಿಗೆ ಈ ನೋವಿನ ಬಾಧೆ ಅಧಿಕವಾದಾಗಲೇ ಅರಿವಿಗೆ ಬರುತ್ತದೆ. ವೈದ್ಯರು ಇದರ ನಿರ್ದಿಷ್ಟ ಕಾರಣವನ್ನು ಸಾಮಾನ್ಯವಾಗಿ ಹೇಳುವುದಿಲ್ಲ. ಚಿಕಿತ್ಸೆಗೆ ಹೋದಾಗಲೆಲ್ಲ ಕೆಲವು ಔಷಧಿ ಮಾತ್ರ ಕೊಟ್ಟು ಒಂದು ವಾರ ಬಿಟ್ಟು ಪುನಃ ಬರಲು ತಿಳಿಸಿದರೆ ಅವರ ಕೆಲಸ ಅಲ್ಲಿಗೆ ಮುಗಿಯಿತು. ರೋಗಿಗಳಿಗೋ ಅವಸರ, ಚೀಟಿ ಪಡೆದು ಓಡುತ್ತಿರುತ್ತಾರೆ. ಈ ಸಮಸ್ಯೆ ಏಕೆ ಬಂದಿದೆ, ಇದನ್ನು ಪುನರಾವರ್ತನೆಯಾಗದಂತೆ ಮಾಡಲು ಏನು ಮುನ್ನೆಚ್ಚರಿಕೆ ಕ್ರಮ ಕೈಗೊಳ್ಳಬೇಕು ಕೇಳಲು ರೋಗಿಗೆ ವ್ಯವಧಾನ, ಅವರ ವೈದ್ಯರಿಗೆ ಆಸಕ್ತಿ ಎರಡೂ ಇರುವುದಿಲ್ಲ. ಅತಿಸ್ಥೌಲ್ಯದಿಂದಾಗಿ ಬೆನ್ನ ಹುರಿಯ ಮೇಲೆ ಒತ್ತಡ ಬಿದ್ದು ಬಿದ್ದು ಒಂದು ಕಶೇರುಕ (Vertebra) ದಿಂದ ಇನ್ನೊಂದು ಕಶೇರುಕದ ಮಧ್ಯೆ ಇರುವ ಅಂತರ ಕಡಿಮೆಯಾಗುತ್ತದೆ. ಇದರಿಂದ ಮಧ್ಯದ ಮಾಂಸಪೇಶೀಯ ಅಲ್ಪತೆಯಿಂದಾಗಿ ಕಶೇರುಕಗಳು ಕಾಲಾನುಕ್ರಮದಲ್ಲಿ ಒಂದಕ್ಕೊಂದು ತೀರ ಹತ್ತಿರ ಬಂದು ಬಿಡುತ್ತವೆ. ಸ್ಥಳದಲ್ಲಿನ ಮಾಂಸಪೇಶೀಯು ಸುಸ್ಥಿತಿಯಲ್ಲಿರದಿದ್ದರೆ ನೋವು ವಿಪರೀತವಾಗುತ್ತದೆ. ಇದನ್ನು ತಪ್ಪಿಸಬೇಕೆಂದರೆ ಅಧಿಕ ತೂಕವನ್ನು ಇಳಿಸುವದೊಂದೇ ದಾರಿ.

ಈ ಬಾಧೆಗಳನ್ನು ತಪ್ಪಿಸಲು ನಡೆಯುವಾಗ, ನಿಲ್ಲುವಾಗ, ಕೆಲಸ ಮಾಡುವಾಗ, ಕುಳಿತುಕೊಂಡಾಗಲೆಲ್ಲ ಹಲವು ಕ್ರಮಗಳನ್ನು ನಿರಂತರವಾಗಿ ಅನುಸರಿಸುವುದರಿಂದ ಸ್ವಲ್ಪ ಪ್ರಮಾಣದಲ್ಲಿ ನೋವು ನಿವಾರಣೆ ಮಾಡಿಕೊಳ್ಳಬಹುದು.

- High heeled ಪಾದರಕ್ಷೆ ಧರಿಸಬಾರದು.
- ನಡೆಯುವಾಗ ಒಂದು ಕಾಲಿನ ಭಾರವನ್ನು ವರ್ಗಾಯಿಸುವಾಗ ಸಮತೋಲನ ಇರಲಿ. ಒಂದು ಕಾಲಿಗೆ ಸತತ ಭಾರ ಬಿಟ್ಟು, ಇನ್ನೊಂದು ಕಾಲಿಗೆ ಅನಿಯಮಿತವಾಗಿ ಭಾರ ಬೀಳಿಸುವುದರಿಂದ ನೋವು ಬರುತ್ತದೆ.

- ಬಹಳ ಸಮಯ ಕುಳಿತುಕೊಳ್ಳಬೇಕಾದರೆ ಕಾಲಿನ ಹತ್ತಿರ ಒಂದು ಎತ್ತರ ವಸ್ತುವನ್ನಿಟ್ಟುಕೊಳ್ಳಿ. ಹಿಂದೆ ಮಹಾರಾಜರು, ಸ್ವಾಮಿಗಳು ಸಿಂಹಾಸನದ ಮೇಲೆ ಕುಳಿತಿರುವಾಗ ಮಣೆಯಂತಹುದನ್ನು ಇಟ್ಟುಕೊಳ್ಳುತ್ತಿದ್ದುದನ್ನು ನೀವು ಗಮನಿಸಿರಬಹುದು. ಇದನ್ನು ಇಟ್ಟುಕೊಳ್ಳುವುದರಿಂದ ಕಾಲಿನೆಡೆಗೆ ಭಾರವು ಅಷ್ಟಾಗಿ ಎಳೆಯದೆ ಬೆನ್ನು ಹುರಿಗೆ ಒತ್ತಡ ಬೀಳುವುದು ಕಡಿಮೆಯಾಗುತ್ತದೆ.
- ನಾವು ಕೆಲಸ ಕಾರ್ಯನಿರ್ವಹಿಸುವ ಮೇಜು ಅತಿ ಎತ್ತರವೂ, ಅತಿ ಕೆಳಗಡೆಯೂ ಇರಬಾರದು. ಸಮತಲದ ನೆಲದ ಮೇಲೆ ಮೇಜು ಇಟ್ಟು ನಾವು ನಿಂತರೆ ನಮ್ಮ ಸೊಂಟ, ಕೈ ಮಣಿಕಟ್ಟಿನ ಎತ್ತರಕ್ಕೆ ಬರಬೇಕು. ಅದು ಮೇಜಿನ ಸರಿಯಾದ ಎತ್ತರ ಇರುತ್ತದೆ.
- ಕುಳಿತುಕೊಳ್ಳವ ಕುರ್ಚಿಯು ಸರಿಯಾಗಿದ್ದು ಓಲಾಡುವಂತಿರಬಾರದು. ಕುರ್ಚಿಯ ಮೇಲೆ ಕುಳಿತಾಗ ಕಾಲುಗಳು ದೃಢವಾಗಿ ನೆಲದ ಮೇಲೆ ಊರಲು ಸಾಧ್ಯವಾಗುವಂತಿರಬೇಕು. ಕಾಲು ನೆಲದಿಂದ ಮೇಲೆ ಇದ್ದರೆ ಅದು ಬೆನ್ನು ಮೂಳೆಗೆ ಭಾರ ಒದಗಿಸುತ್ತದೆ. ತತ್ಪರಿಣಾಮ ಕಾಲಾಂತರದಲ್ಲಿ ನೋವು ಹುಟ್ಟು ಹಾಕುತ್ತದೆ.
- ಬೆನ್ನು ಭಾಗಕ್ಕೆ, ಕೆಳ ಭಾಗಕ್ಕೆ ಒತ್ತಿಕೊಂಡು ಇರುವಂತಹ ಕುರ್ಚಿ ಇದ್ದಲ್ಲಿ ಭಾರದ ಭಾರ ತಪ್ಪುತ್ತದೆ. ಇದರಿಂದ ಸುದೀರ್ಘ ಸಮಯ ಕುಳಿತರೂ ಬೆನ್ನಿಗೆ ಅಷ್ಟಾಗಿ ತೊಂದರೆ ಉಂಟಾಗದು.
- ಎರಡೂ ಬದಿಗೆ ಕೈಗಳನ್ನು ಆಸರೆಯಾಗಿಡಲು ವ್ಯವಸ್ಥೆ ಇರುವ ಕುರ್ಚಿ ಅನುಕೂಲಕರ. ಇದರಿಂದಲೂ ಬೆನ್ನಿಗೆ ಹೆಚ್ಚಿನ ಶ್ರಮ ತಪ್ಪುತ್ತದೆ.
- ಪುಸ್ತಕ, ಕಂಪ್ಯೂಟರ್, ಬರೆಯುವ, ಓದುವ ಪುಟಗಳು ನಿಮ್ಮನ್ನು ಮುಂದಕ್ಕೆ ಬಾಗಿಸಿ ಕೆಲಸ ಮಾಡದಂತಿರಲಿ. ಇದರಿಂದಾಗಿ ನೀವು ಬಹಳ ಅವ್ಯವಸ್ಥಿತ ಸ್ಥಿತಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದೀರಿ, ಶೀಘ್ರವೇ ಬೆನ್ನನೋವು ಬಾಧೆಗೆ ತುತ್ತಾಗುವಿರಿ ಎಂದು ನಿಶ್ಚಿತವಾಗಿ ಹೇಳಬಹುದು.
- ವಾಹನ ಚಲಾಯಿಸುವಾಗ ವೇಗ ಅತ್ಯಂತ ನಿಯಂತ್ರಣದಲ್ಲಿರಲಿ. ಬ್ರೇಕ್ ಹಾಕಿದಾಗ, ಹಿಂದೆ ಮುಂದೆ ನೇತಾಡುವಾಗ ಬೆನ್ನು ಮೂಳೆಗೇ ಏಟಾಗುವುದು ಖಚಿತ. ಆದ್ದರಿಂದ ವೇಗ ನಿಯಂತ್ರಣದಲ್ಲಿರಲಿ. ವಾಹನದಲ್ಲಿರುವಾಗ ಸಾಧ್ಯವಾದಷ್ಟು ಸೀಟಿ ಪಟ್ಟಿ ಕಟ್ಟಿಕೊಳ್ಳಿ.
- ವಾಹನದ ಸೀಟಿನಲ್ಲಿ ಕುಳಿತಾಗ, ಚಲಾಯಿಸುವಾಗ ಬೆನ್ನಿನ ಪೂರ್ಣ ಭಾಗವು ಒತ್ತಿಕೊಂಡಂತಿರಲಿ. ಹಿಂದೆ ಒಂದು ಸಣ್ಣ ದಿಂಬನ್ನು ಇಟ್ಟುಕೊಳ್ಳುವುದೂ ಒಳ್ಳೆಯದು.
- ಸತತ ವಾಹನ ಪ್ರಯಾಣ ಖಂಡಿತವಾಗಿಯೂ ದುಷ್ಪರಿಣಾಮ ಬೀರುತ್ತದೆ. ಅವಸರದ ಕಾರಣವಾಗಿ ಬಹುಜನರು ತರಾತುರಿಯಲ್ಲಿ ಓಡಿಸಿಕೊಂಡು ಹೋಗುತ್ತಾರೆ. ಇದು ಒಂದು ಘಟ್ಟದಲ್ಲಿ ನೋವು ನೀಡುವುದು ಸತ್ಯ. ಆದ್ದರಿಂದ ಪ್ರತಿ ಘಂಟೆಗೊಂದಾವರ್ತಿಯಾದರೂ ವಾಹನ ನಿಲ್ಲಿಸಿ ೫-೧೦ ನಿಮಿಷಗಳ ವಿಶ್ರಾಂತಿ ಅಥವಾ ಅಲ್ಪ ವ್ಯಾಯಾಮ ಮಾಡಬೇಕು.
- ಕಾರಿನಿಂದ ಇಳಿಯುವಾಗ ಬಾಗಿಲೆಡೆ ದೇಹವನ್ನು ಒರಗಿಸಿ ಒಂದು ಕಾಲನ್ನು ಹೊರಗೆ ಇಳಿಯಬಿಟ್ಟು ನಿಧಾನವಾಗಿ ಹೊರಬರಬೇಕು. ಬಹಳ ಜನರು ಕಾರಿನ ಸೀಟಿನಲ್ಲಿಯೇ ಎರಡೂ ಕಾಲು ಹೊರಹಾಕಲು, ಅಲ್ಲಿಂದಲೇ ಇಳಿಯಲು ಪ್ರಯತ್ನಿಸುತ್ತಾರೆ. ಇದು ಸಮಂಜಸವಾದದ್ದಲ್ಲ.
- ಬಾರದ ವಸ್ತುಗಳನ್ನು ಎತ್ತುವಾಗ ನೀವು ಬಗ್ಗಬೇಡಿ. ನಿಮ್ಮ ಸೊಂಟವನ್ನು ಸಹ ಬಗ್ಗಿಸಬೇಡಿ. ಮೊಣಕಾಲುಗಳನ್ನು ಮಡಚಿ ಒಂದು ಕಾಲನ್ನು ಸ್ವಲ್ಪ ಮುಂದೆ ಇಟ್ಟು ನಿಧಾನವಾಗಿ ಎತ್ತಿ, ಬಾರವು ಕೈ ಮತ್ತು ಕಾಲುಗಳಿಂದ ವರ್ಗಾಹಿತವಾಗಬೇಕೇ ಹೊರತು ಬೆನ್ನಿನ ಸಹಾಯದಿಂದಲ್ಲ ಎಂಬುದನ್ನು ಗಮನಿಸಿ.
- ಸಾಕಷ್ಟು ಶಕ್ತಿ ಇದೆ, ಬಲ ಇದೆಯೆಂದು ಅವಿಶ್ರಾಂತವಾಗಿ ನಡೆಯುವ, ಈಜುವ, ವ್ಯಾಯಾಮ ಮಾಡುವ ಕಾರ್ಯಕ್ಕಿಳಿಯಬಾರದು.
- ಮನೆಗೆಲಸ ಮಾಡುವಾಗೆಲ್ಲ ನಮಗೆ ಆಯಾಸವಿಲ್ಲವೆಂದು ಅವಿರತವಾಗಿ ಕೆಲಸ ಮಾಡಬಾರದು. ಯಾವುದಕ್ಕೂ ಒಂದು ಮಿತಿ, ಸಹನೆ ಇರುತ್ತದೆ. ತತ್ಕಾಲಕ್ಕೆ ಅದು ನಮಗೆಲ್ಲ ಏನೂ ಆಗದೆಂಬ ಭಾವ ಮೂಡಿಸಿದರೂ ನಂತರದಲ್ಲಿ ನಿಶ್ಚಿತವಾಗಿಯೂ ತೊಂದರೆ ಉಂಟು ಮಾಡುತ್ತದೆ. ಅತಿಯಾದ ಆತ್ಮವಿಶ್ವಾಸದಿಂದ ಅತ್ಯಧಿಕ ಭಾರ, ಒತ್ತಡದ ಕೆಲಸ ಮಾಡಬಾರದು.
- ಕೆಲವು ಜನರು ತಮ್ಮ ಮಕ್ಕಳನ್ನು ಆಡಿಸುವಾಗ ಎರಡೂ ಕಾಲು ಮೇಲೆ ಮಗುವನ್ನು ಮೇಲೆತ್ತಿ ತೂರುವ, ಓಲಾಡಿಸುವ ಆಟವಾಡಿಸುತ್ತಾರೆ. ಇದರಿಂದ ಮಗು ಹಾಲುನಗೆ ಸೂಸಿದರೂ, ನಮಗೆ ಆನಂದದ ಕೇಕೆ ಖುಷಿ ತಂದರೂ ಆ ಮಗುವಿನ ಬೆನ್ನು ಮೂಳೆಗೆ ಸ್ವಲ್ಪ ಹೆಚ್ಚು ಕಡಿಮೆಯಾದರೂ ಅಪಾಯ ತಪ್ಪಿದ್ದಲ್ಲ. ಆದ್ದರಿಂದ ಇಂತಹ ಅಪಾಯದ ಆಟಗಳನ್ನು ದೂರವಿಡುವುದೊಳ್ಳೆಯದು.
- ಪ್ರತಿ ಶ್ರಮದ ಕೆಲಸ ಮಧ್ಯೆ ಅಲ್ಪಕಾಲದ ವಿಶ್ರಾಂತಿ ಇರಲಿ. ಬೆನ್ನು ಬಹುದಿನ ಬಾಳಿಕೆ ಬರಲು ಬಹಳ ಜತನದಿಂದ ಅದನ್ನು ಉಪಯೋಗಿಸಬೇಕು.

★







# ಶ್ರೀ ಸಿದ್ಧೇಶ್ವರ ಪುರಾಣ

– ಕೋ.ರಂ. ಬಸವರಾಜು
ಪ್ರಾಧ್ಯಾಪಕರು,
ಶ್ರೀ ಸಿದ್ಧಗಂಗಾ ಸಂಸ್ಕೃತ ಕಾಲೇಜು,
ಶ್ರೀ ಸಿದ್ಧಗಂಗಾ ಕ್ಷೇತ್ರ

ಭಾಗ-೧೭

ನಂತರ ಶ್ರೀಜಗದ್ಗುರು ತೋಂಟದಾರ್ಯರು ತುಮಕೂರಿನಿಂದ ಹೊರಟು ಅನ್ನದಾನಿಮಲ್ಲಿಕಾರ್ಜುನನ ದೇವಾಲಯಕ್ಕೆ ಆಗಮಿಸುತ್ತಾರೆ. ಅಲ್ಲಿ ಮೂರ್ತಿಗೊಂಡಿರಲು ನಾನಾ ಪ್ರದೇಶಗಳಿಂದ ಭಕ್ತ ಸಮೂಹವು ಬಂದು ಪಾದಕ್ಕೆ ವಂದಿಸಿ ಅಭೀಷ್ಟಗಳನ್ನು ಪಡೆದು ಸಂತೋಷಪಡುವರು. ಹೀಗಿರುವಾಗ ಎಲೆಯ ಪರ್ವಯ್ಯನೆಂಬ ಭಕ್ತನು ತನ್ನ ಪತ್ನಿಯಾದ ಲಿಂಗಮ್ಮ ಹಾಗೂ ಮೂರು ವರ್ಷದ ಬಾಲಕನೊಡನೆ ಬಂದು ತನ್ನ ಮಗನ ಹೆಸರಿನ ಹರಕೆಯನೊಪ್ಪಿಸಿ (ಸಿದ್ಧೇಶ ನೆಂದು ಹೆಸರಿಟ್ಟು) ಆಶೀರ್ವಾದ ಪಡೆದು ತೆರಳುತ್ತಾನೆ. ಆದರೆ ಮರುದಿನವೇ ಆ ಬಾಲಕನಿಗೆ ಜ್ವರಹಿಡಿದು ಒಂದು ವಾರದೊಳಗೆ ಸತ್ತುಹೋಗುತ್ತಾನೆ. ಆ ಕೂಡಲೇ ದುಃಖಿತಪ್ತರಾದ ಜನನೀ ಜನಕರು ಮೃತಶಿಶುವನ್ನು ತಂದು ಶ್ರೀ ಎಂದು ಗೋಳಿಡುತ್ತಾರೆ. ಆಗ ಮಹಾಮಹಿಮರೂ ಕಾಲಸಂಹರರೂ ಆದ ಶ್ರೀ ಸಿದ್ಧಲಿಂಗೇಶ್ವರರು ಆ ಮೃತಶಿಶುವಿನ ಮೇಲೆ ಕಾರುಣ್ಯ ದೃಷ್ಟಿಯ ಬೀರಿ ಭಸ್ಮವನ್ನು ಮಂತ್ರಿಸಿ ಹಣೆಗೆ ಹಚ್ಚುವರು. ಆಗ ಆ ಮೃತಬಾಲಕ ಪ್ರಾಣಿಸಿ ಕಣ್ತೆರೆಯುತ್ತಾನೆ. ನೆರೆದ ಜನನೀಜನಕರಿಗೇ ಭಕ್ತರಿಗೂ ಆಶ್ಚರ್ಯವೂ ಆನಂದವೂ ಹಿಂದೆ ಕದಿರೆ ರೇಮಯ್ಯನೆಂಬುವನು ಸತ್ತವಾರದ ನಂತರ ಸಮಾಧಿಯನ್ನು ಕೀಳಿಸಿ ಸೋಮಯ್ಯ ಅಣ್ಣಲದೇವಿಯ ಎಂಬುವರ ಮಗನಿಗೆ ಹರಣವಿತ್ತುದನ್ನು ಕೇಳಿದ್ದೆವು. ಮೊರೆವ ವೇಮಯ್ಯನೆಂಬುವನು ನಂದಿಕೋಲಬಲ್ಲಯ್ಯನೆಂಬುವನ ಮನಿಗೆ ಪ್ರಾಣಕೊಟ್ಟದ್ದನ್ನು ಕೇಳಿದೆವು. ಶರಣನಾದ ಕೋವೂರ ಬೊಮ್ಮಯ್ಯನು ಸತ್ತ ತನ್ನ ಸುತನನ್ನು ಆರು ತಿಂಗಳನಂತರ ಬದುಕಿಸಿದನೆಂಬುದನ್ನು ಬಲ್ಲೆವು. ಇದರಂತೆ ನಂಬಿಯಣ್ಣನು ಮೊಸಳೆನುಂಗಿದ ತನ್ನ ಶಿಶುವನ್ನು ಐದು ವರ್ಷ ನಂತರದಲ್ಲಿ ಬದುಕಿಸಿದನ್ನು ಎಕಲೂರಿನ ನುಲಿಯ ಕಲ್ಲಪ್ಪನೆಂಬುವನು ಹಾವುಕಡಿದು ಸತ್ತು ಹೋದ ತನ್ನ ಮಗನನ್ನು ಬದುಕಿಸಿದ್ದನ್ನು ಗುರುಸಿದ್ಧರಾಮನು ಈಶನೆಂಬ ಹಸುಳೆಗೆ ಹರಣವಿತ್ತುದನ್ನೂ ಕೇಳ್ದರಿವೆವು. ಅದನ್ನು ಇಂದು ಪ್ರತ್ಯಕ್ಷವಾಗಿ ಕಂಡ ಅನುಭವಿಸಿದೆವೆಂಬುದಾಗಿ ಕೊಂಡಾಡುತ್ತಿದ್ದರು.

ಮತ್ತೊಂದು ದಿವಸ ರಾಯದುರ್ಗದ (ದೇವರಾಯದುರ್ಗ?) ಮಲ್ಲಸೆಟ್ಟಿಯೆಂಬುವನಿಗೆ ಶಿವಯೋಗಿಯ ದರ್ಶನ ಸ್ಪರ್ಶನದಿಂದ ಪುನೀತನಾಗಬೇಕೆಂಬ ಬಯಕೆಯುಂಟಾಗುತ್ತದೆ. ''ನಾವಿಬ್ಬರೂ ಹೋಗಿ ಶಿವಯೋಗಿಯ ದರ್ಶನ ಮಾಡಿ ಬರೋಣ ಬಾ'' ಎಂಬುದಾಗಿ ತನ್ನ ಹೆಂಡಿಯನ್ನು ಕರೆಯುತ್ತಾನೆ. ಅದಕ್ಕೆ ಅವಳು ''ಯಾರಿಂದ ಬಂತು ನಿನಗೀ ಬುದ್ಧಿ? ನಮ್ಮ ಮನೆದೇವರಾದ ಮೈಲಾರ ಮಾಳವರನ್ನು ಬಿಟ್ಟು ಹೋದರೆ ಕೆರಳುವುದಿಲ್ಲವೆ? ಕೆರಳಿ ಕೇಡೊಡ್ಡದಿರರೆ? ಆದ್ದರಿಂದ ನಾನು ಬರಲೊಲ್ಲೆನು ನೀನು ಬೇಕಾದರೆ ಹೋಗು'' ಎಂದು ಗದರಿಸುತ್ತಾಳೆ. ಅದಕ್ಕೆ ಮಲ್ಲಿಸೆಟ್ಟಿಯು ''ಎಲೆಲೆ ಪಾಪಿಷ್ಠೆ! ಸುಕೃತಂಗೆಟ್ಟ ನಾರಿ! ಲೋಕದಲ್ಲಿ ಸಕಲ ಜನರನ್ನು ಪೀಡಿಸುವ ಕಿರುಕುಳ ದೈವಗಳಿಗೆ ಅಂಜಬಹುದೆ? ನರಕಕ್ಕೆ ಗುರಿಮಾಡಿ ಕೆಡಿಸುವ ಅವನ್ನು ನಂಬಬಹುದೆ?'' ಎನ್ನುತ್ತಾನೆ. ಆಗ ಆಕೆಯು ಅಯ್ಯೋ! ಭಕ್ತರ ಜೊತೆ ಸೇರಿ ನನ್ನ ಗಂಡನ ಬುದ್ಧಿ ವಿಕಳಗೊಂಡಿದೆ. ಹಣೆಗೆ ಬೂದಿ ಬಳಿದುಕೊಂಡು ಕೊರಳಿಗೆ ರುದ್ರಾಕ್ಷಿ ಕಟ್ಟಿಕೊಂಡು ನಮ್ಮ ಮನೆದೈವವನ್ನು ತೊರೆದುಬಿಟ್ಟ ಎಂದು ಚಿಂತಿಸಿ ನಾನು ಬಾರೆನೆಂದು ಹಠಹಿಡಿಯುತ್ತಾಳೆ. ಗತಿಯಿಲ್ಲದೆ ಅವನು ಹೆಂಡತಿಯನ್ನು ಬಿಟ್ಟು ತಾನೊಬ್ಬನೇ ಗುರುದರ್ಶನಕ್ಕೆ ಬರುತ್ತಾನೆ. ಬಂದು ಗುರುವನ್ನು ಕಂಡು ಕಾಲಿಗೆರಗಿ 'ದೇವಾ! ನನ್ನ ಸತಿ ನಿಮ್ಮ ಮಹಿಮೆಯನ್ನರಿಯದೆ ಮಂದಮತಿಯೆನಿಸಿ ಕಿರುಕುಳ ದೈವವನ್ನು ನಂಬಿ ಕರೆದರೂ ಸನ್ನಿಧಿಗೆ ಬಾರದೆ ಮನೆಯಲ್ಲಿಯೇ ಕುಳಿತಿದ್ದಾಳೆ. ಅವಳು ಅನ್ಯದೈವವನ್ನು ಪೂಜಿಸುತ್ತಿರುವುದನ್ನು ನನ್ನ ಮನಸ್ಸು ಸಹಿಸದು. ಗಂಡ ಶಿವಭಕ್ತ ಹೆಂಡತಿ ಮಾರಿಭಕ್ತೆ ಎಂಬಂತಾಗಿದೆ ನಮ್ಮ ಸಂಸಾರ. ಅದರಿಂದ ಉದ್ಧಾರಮಾಡಬೇಕು ಗುರುವೆ' ಎಂಬುದಾಗಿ ಬೇಡುತ್ತಾನೆ. ಆಗ ಶ್ರೀ ಸಿದ್ಧಲಿಂಗೇಶ್ವರರು 'ಭಸ್ಮವನ್ನು ಕೊಟ್ಟು, ಹೋಗು ನಿನ್ನೂರಿಗೆ, ಸಂಶಯಬಿಡು, ನಿನ್ನ ಹೆಂಡತಿ ಸರಿಹೋಗುವಳು,

ಹೋಗು' ಎಂದು ಹೇಳಿ. ಆಶೀರ್ವದಿಸಿ ಕಳುಹಿಸಿಕೊಟ್ಟರು. ಅದರಂತೆಯೇ ಆ ಮಲ್ಲಿಸೆಟ್ಟಿ ತನ್ನ ಮನೆಗೆ ಮರಳಿಬರುತ್ತಾನೆ. ಹೆಂಡತಿ ಸಂತೋಷಪಟ್ಟು ಉಪಚರಿಸಿ ಹೋಗಿಬಂದ ವೃತ್ತಾಂತವನ್ನು ಹೇಳೆಂದು ಕೇಳುವಳು. ಗುರುಮಹಿಮೆಯನ್ನು ಕೇಳಿ, ಮನಃಪರಿವರ್ತನೆಯಾದರೂ ಆಕೆ ಮನೆದೇವರು ಮೈಲಾರನನ್ನು ಬಿಡಲಾರನೇ ಆತನ ಕೇಡುಂಟುಮಾಡುವನೆಂಬ ಬಯವನ್ನು ವ್ಯಕ್ತಪಡಿಸುತ್ತಾಳೆ. ಆಗ ಮಲ್ಲಿಸೆಟ್ಟಿಯು ಕೊರಳಿಗೆ ಕವಡೆಕಟ್ಟಿಕೊಂಡು ನಾಯಾಗಿ ಬೊಗಳುವ ಆ ನಿನ್ನ ಕಿರುಕುಳದೈವವನ್ನು ನಂಬಿ ನರಕಕ್ಕೆ ಏಕೆ ಬಿದ್ದು ಹೋಗುವೆ? ಸರ್ವಲೋಕ ಪತಿಯಾದ ಸಿದ್ಧಲಿಂಗರನ್ನು ಭಜಿಸಿ ಸಾಯದ ಪದವಿಯನ್ನು ಪಡೆ ಎಂದು ಹಿತನುಡಿಯುತ್ತಾನೆ. ಆಗ ಆಕೆ – ಅದಾಗದು ನಿನ್ನ ದೈವ ನಿನ್ನದು, ನನ್ನ ದೈವ ನನ್ನದು. ಮನೆದೈವದ ಬಗ್ಗೆ ಉದಾಸೀನ ಮಾಡಬೇಡ' ಎಂದು ನುಡಿದು ಸುಮ್ಮನಾಗುತ್ತಾಳೆ. ಆದರೆ ಇದಕ್ಕಿದ್ದಂತೆ ಕಾಕತಾಳೀಯವಾಗಿ ಮರುದಿನವೇ ಅವರ ಮನೆಯಲ್ಲಿದ್ದ ಕರುಹಾಕಿದ್ದ ಕರೆಯುವ ಎಮ್ಮೆಯೊಂದು ತನಗೆ ತಾನೇ ನೆಲದಲ್ಲಿ ಬಿದ್ದು ಸತ್ತುಹೋಗುತ್ತದೆ. ಆಗ ಅದಕ್ಕೆ ಅವನ ಹೆಂಡತಿ 'ನಮ್ಮ ಮನೆದೇವರನ್ನು ಹೀಯಾಳಿಸಿದಕ್ಕೆ ನೋಡು ಏನು ಗತಿ ಬಂತು? ಅದಕ್ಕೆ ನಮ್ಮ ಎಮ್ಮೆಯೇ ಸತ್ತು ಹೋಯ್ತು' ಎಂದು ನಿಂದಿಸಿಸುದಲ್ಲದೇ ಅಕ್ಕಪಕ್ಕದ ಮನೆಯ ಕಾಳವ್ವ ಕೆಂಚವ್ವಾದಿಗಳನ್ನು ಕರೆದು ತೋರಿಸಿ ರಟ್ಟುಗುಟ್ಟುತ್ತಾ ಬದುರುತ್ತಾಳೆ.

ಅವಳ ರಂಪವನ್ನು ನೋಡಿ ಗಂಡನಾದ ಮಲ್ಲಿಸೆಟ್ಟಿಯು – 'ಎಲೈ ಚಾಂಡಾಳಿಯೆ! ಜೀವಿಗಳ ಹುಟ್ಟು ಸ್ಥಿತಿ ಸಾವುಗಳು ಕರ್ತನಾದ ಸಿದ್ಧೇಶನಿಂದಲ್ಲದೇ ಕಿರುಕುಳ ದೈವಂಗಳಿಂದ ಸಾಧ್ಯವಿಲ್ಲವು. ಏತಕ್ಕೆ ಹೀಗೆ ಅಪಲಪಿಸುವೆ' ಎಂದು ಛೇಡಿಸುತ್ತಾನೆ. ಆಗ ಆಕೆಯು 'ಹಾಗಾದರೆ ನಿನ್ನೊಡೆಯ ಸಿದ್ಧೇಶ ಈಗಿಂದೀಗಲೇ ಸತ್ತು ಹೋಗಿರುವ ನಮ್ಮ ಎಮ್ಮೆಯನ್ನು ಬದುಕಿಸಲಿ, ನೋಡೋಣ' ಎಂಬುದಾಗಿ ಕಿನಿಸು ನುಡಿಯುತ್ತಾಳೆ. ಆಗ ಮಲ್ಲಿಸೆಟ್ಟಿಯು 'ನಾನಿನ್ನು ಸುಮ್ಮನಿರಬಾರದು, ನಮ್ಮೊಡೆಯನ ಮಹಿಮೆಯನ್ನು ಮರೆಸಲೇಬೇಕೆಂಬುದಾಗಿ' ನಿಶ್ಚೈಸಿ ಸಿದ್ಧೇಶ್ವರ ಕೊಟ್ಟಿದ್ದ ಭಸ್ಮವನ್ನು 'ಸಿದ್ಧೇಶ ಬದುಕಿಸು' ಎಂದು ಸ್ಮರಿಸುತ್ತಾ ಸತ್ತೆಮ್ಮೆಯ ಮೈಮೇಲೆ ಮಂತ್ರಪೂರ್ವಕವಾಗಿ ಸಿಂಪಡಿಸುತ್ತಾನೆ. ಕೂಡಲೇ ಆ ಎಮ್ಮೆಯ ದೇಹದಲ್ಲಿ ಜೀವ ಸಂಚರಿಸಿ ಕೈಕಾಲು ಅದುರಿಸುತ್ತಾ ಎದ್ದು ಪಕ್ಕದಲ್ಲಿದ್ದ ಕರುವನ್ನು ಮೂಸಿ ಹುಲ್ಲನ್ನು ಮೇದು ನೀರು ಕುಡಿದು ಯಥಾಪೂರ್ವಸ್ಥಿತಿಗೆ ಬರುತ್ತದೆ. ಅದನ್ನು ನೋಡಿ ಮಲ್ಲಿಸೆಟ್ಟಿ ಹೆಂಡತಿಗೆ ಸಿದ್ಧೇಶನನ್ನು ಉದಾಸೀನವಾಗ ಅಂದುದಕ್ಕೆ ಭಯವೂ ಎಮ್ಮ ಬದುಕಿದುದಕ್ಕೆ ಆಶ್ಚರ್ಯವೂ, ಕಿರಿಕುಳದೈವ ಕೂಡಲೇ ಪತಿಪಾದದ ಮೇಲೆ ಬಿದ್ದು ಆ ಮಹಾಮಹಿಮನ ದರ್ಶನಮಾಡಿ ಅಪರಾಧವನ್ನು ಕ್ಷಮಿಸುವಂತೆ ಬೇಡಲು ಸನ್ನಿಧಿಗೆ ಕರೆದುಕೊಂಡು ಹೋಗುವಂತೆ ಕೇಳಿಕೊಳ್ಳುತ್ತಾಳೆ. ಹೆಂಡತಿಯ ಈ ಪರಿವರ್ತನೆಯನ್ನು ಮಲ್ಲಿಸೆಟ್ಟಿ ಮಹಾಸಂತೋಷಪಡುತ್ತಾನೆ. ಆಕೆಯೂ ಕೂಡಕೂಡಲೇ ಮನೆಯಲ್ಲಿದ್ದ ಮಾಳವ, ಜಕ್ಕಾಮಿ, ಮೈಲಾರನಂಥ ಎಲ್ಲ ಕಿರುಕುಳ ದೈವವನನು ಕಿತ್ತೊಗೆದು ಸಾರಣೆಮಾಡಿ ಪರಿಶುದ್ಧ ಚಿತ್ತಳಾಗಿ ಸಿದ್ಧೇಶನಿಗೆ ತಪ್ಪೊಪ್ಪಿಗೆಯ ಹರಕೆ ಕಟ್ಟುತ್ತಾಳೆ. ಮರುದಿನವೇ ಗಂಡನೊಡನೆ ಸಿದ್ಧೇಶನ ಸನ್ನಿಧಿಗೆ ತೆರಳಿ ಪಾದದ ಮೇಲೆ ಹಣೆಯಿಟ್ಟು ಇನ್ನೆಂದು ಕಿರುಕುಳದೈವಂಗಳ ನಂಬೆನು ಭಜಿಸೆನು ಎಂಬುದಾಗಿ ಭಾಷೆ ಮಾಡುತ್ತಾಳೆ. ಗುರುವರೇಣ್ಯ ಸಿದ್ಧೇಶನ ಅವಳ ಮನಃಪರಿವರ್ತನೆಗೆ ಮನಸ್ಸಿನಲ್ಲೇ ಸಂತೋಷಪಟ್ಟು ಆಶೀರ್ವದಿಸಿ ಕಳುಹಿಸಿಕೊಡುತ್ತಾರೆ.

ಮತ್ತೊಂದು ದಿನ ಬರುಡುಗುಂಟೆಯ ಗಬ್ಬಿರಾಜನೆಂಬುವನು ತನ್ನಲ್ಲಿದ್ದ ಉತ್ತಮಜಾತಿಯ ಕುದುರೆ (ಜಾತ್ಯಶ್ವ)ಯು ಸತ್ತುಹೋಗಲಾಗಿ ಓಡೋಡಿಬಂದು ಸಿದ್ಧೇಶನನ್ನು ಶರಣುಹೋಗಿ ಕುದುರೆಯನ್ನು ಬದುಕಿಸುವಂತೆ ಅಂಗಲಾಚಿ ಬೇಡುವನು. ಆಗ ಸಿದ್ಧೇಶ್ವರರು ಭಸಿತವನ್ನು ಕೊಟ್ಟು ಸತ್ತ ಕುದುರೆಯ ಮೇಲೆ ತಳಿಸುವಂತೆ ಆದೇಶಮಾಡಿ ಕಳುಹಿಸಿ ಕೊಡುವರು. ತನ್ನೂರಿಗೆ ಬಂದು ಅದರಂತೆ ಸಿದ್ಧೇಶವನ ನಾಮಸ್ಮರಣೆಮಾಡುತ್ತಾ ವಿಭೂತಿಯನ್ನು ಅದರ ಮೇಲೆ ಸಿಂಪಡಿಸಲಾಗಿ ಕುದುರೆ ಬದುಕುತ್ತದೆ.

ಇನ್ನೊಂದು ದಿವಸ ಸಿದ್ಧೇಶನ ಮಹಿಮೆಯನ್ನು ಕರ್ಣಾಕರ್ಣಿ ಕೇಳಿದ ಕುಂತಲದೇಶದ ಹುಟ್ಟು ಕುರುಡನಾದ ಜಂಗಮನೊಬ್ಬನು ಸನ್ನಿಧಿಗೆ ಗೈತರುತ್ತಾನೆ. ದಿವ್ಯಪಾದದಲ್ಲಿ ಹಣೆ ಉಜ್ಜಿತನಗೆ ಕಣ್ಣು ಕೊಡುವಂತೆ ಭಕ್ತಿಯಿಂದ ಪ್ರಾರ್ಥಿಸುತ್ತಾನೆ. ಆಗ ಸಿದ್ದೇಶ್ವರರು ಕರುಣಾಪೂರ್ವವಾದ ದೃಷ್ಟಿಯನ್ನು ಬೀರಿ, ತಮ್ಮ ಶಿವಹಸ್ತದಿಂದ ತಲೆಹಿಡಿದು ಎತ್ತಿ – 'ಇಲ್ಲಿ ನೋಡು! ಕಣ್ತೆರೆದು ಕಾಣು!! ಶಿವಗಣಂಗಳು ಬಂದು ನಿಂತಿದ್ದಾರೆ' ಎನ್ನುವರು. ಆಗ ಆ ಜಾತಂಧರಾದ ಜಂಗಮರು ಪ್ರಯಾಸದಿಂದ ಕಣ್ಣುಬಿಟ್ಟು ಎದುರಿಗೆ ಸಾಕ್ಷಾತ್ ಶಿವರೂಪಿಯಾದ ಸಿದ್ಧೇಶ್ವರರನ್ನು ಹಾಗೂ ಶಿಷ್ಯವೃಂದವನ್ನು ನೋಡುವರು. ಆಗ ಅವರಿಗಾದ ಆನಂದ ಅಷ್ಟಿಷ್ಟಲ್ಲ. ಕಣ್ತುಂಬ ನೋಡಿ ಮನದುಂಬಿ ಹಾಡುವರು, ಹೊಗಳುವರು, ಕೀರ್ತಿಸುವರು. ಅವರ ಆ ಸಂಭ್ರಮದಲ್ಲಿ ನೆರೆದಿದ್ದ ಜಗವೆಲ್ಲಾ ಆಶ್ಚರ್ಯಾನಂದಗಳಲ್ಲಿ ತೇಲಿಹೋಯ್ತು.

★





ಕಂಬನಿ



## ಲಿಂಗೈಕ್ಯ : ಎಸ್. ಚೆನ್ನಬಸವಯ್ಯ

ದಿನಾಂಕ : ೪.೯.೦೫ರಂದು ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ, ಕರ್ನಾಟಕ ರಾಜ್ಯದ ವಿಧಾನಪರಿಷತ್ತಿನ ಸದಸ್ಯರೂ ಆಗಿ ೧೭ ವರ್ಷಗಳ ಕಾಲ ಸಕ್ರಿಯ ಸೇವೆಯನ್ನು ಸಲ್ಲಿಸಿದ್ದ ಶ್ರೀ ಎಸ್. ಚೆನ್ನಬಸವಯ್ಯನವರು ಲಿಂಗೈಕ್ಯರಾದುದನ್ನು ತಿಳಿದು ''ಸಿದ್ಧಗಂಗಾ'' ಅತೀವ ದುಃಖವನ್ನು ಅನುಭವಿಸಿತು.

ಲಿಂಗೈಕ್ಯರು ಶಿಕ್ಷಕರ ಪ್ರತಿನಿಧಿಯಾಗಿ ಸಮರ್ಥ ಹೋರಾಟವನ್ನು ನಡೆಸಿದ ದಕ್ಷರೆನಿಸಿದ್ದರು. ಸರಳ ಹಾಗೂ ನೇರ ಮತ್ತು ಖಚಿತ ನುಡಿಗಳಿಗೆ ಅವರು ಮತ್ತೊಂದು ಹೆಸರು. ಶ್ರೀಮಠದೊಂದಿಗೆ ಅವರಿಗಿದ್ದ ಅಭಿಮಾನ, ಭಕ್ತಿ ಕೃತಜ್ಞತಾ ಭಾವ ಅನನ್ಯವಾದುದು. ಮೇಲಾಗಿ ಸ್ಮರಣೀಯವಾದುದು.

ಗುಬ್ಬಿ ತಾಲ್ಲೂಕಿನ ತೋಟ ಸಾಗರದಲ್ಲಿ ಜನ್ಮ ತಳೆದ ಶ್ರೀ ಚೆನ್ನ ಬಸವಯ್ಯನವರು ಸುಸಂಸ್ಕೃತರೆನಿಸಿಕೊಂಡು ಸದ್ಗೃಹಸ್ಥರಾಗಿ ಬಾಳಿದರು.

ಶ್ರೀಯುತರ ಅಗಲಿಕೆಯಿಂದ ಶಿಕ್ಷಕರ ಕ್ಷೇತ್ರ ತುಂಬಲಾರದ ನಷ್ಟಕ್ಕೊಳಗಾಗಿದೆ ಮತ್ತು ಶ್ರೀಮಠ ಒಬ್ಬ ಸಮರ್ಥ ಸೇವಾಶೀಲರನ್ನು ಕಳೆದು ಕೊಂಡಂತಾಗಿದೆ. ಶ್ರೀಯುತರ ಆತ್ಮಕ್ಕೆ ಬಸವಾದಿ ಪ್ರಮಥರು, ಚಿರಶಾಂತಿಯನ್ನು ನೀಡಲೆಂದು ''ಸಿದ್ಧಗಂಗಾ'' ಪ್ರಾರ್ಥಿಸುತ್ತದೆ. ಹಾಗೂ ಮೃತರ ಕುಟುಂಬವರ್ಗದವರಿಗೆ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ನೀಡಲೆಂದು ಶ್ರೀ ಸಿದ್ಧಗಂಗಾ ಗುರುಪರಂಪರೆ ಆಶೀರ್ವದಿಸಲೆಂದು ಬಿನ್ನವಿಸಿಕೊಳ್ಳುತ್ತದೆ.

ಕಂಬನಿ



## ಪ್ರೊ|| ಪಿ.ಎಸ್. ಸದಾಶಿವಯ್ಯ

ದಿನಾಂಕ : ೬.೯.೦೫ರಂದು ಹೃದಯಾಘಾತಕ್ಕೊಳಗಾಗಿ ಲಿಂಗೈಕ್ಯರಾದ ಶ್ರೀಸಿದ್ಧಗಂಗಾ ಬಾಲಕರ ಪದವಿ ಕಾಲೇಜಿನ ವಾಣಿಜ್ಯ ವಿಭಾಗದ ಪ್ರಾಧ್ಯಾಪರಾಗಿದ್ದ ಪ್ರೊ|| ಸದಾಶಿವಯ್ಯನವರ ಅಗಲಿಕೆಯನ್ನು ತಿಳಿದು ''ಸಿದ್ಧಗಂಗಾ'' ತೀವ್ರ ಶೋಕವನ್ನು ಅನುಭವಿಸಿದೆ.

ಶ್ರೀಯುತರು ಪ್ರಾಧ್ಯಾಪಕರಾಗಿ ಸೌಜನ್ಯಶೀಲ ಸ್ನೇಹಿತರೆನಿಸಿ ಶ್ರೀಮಠದ ನಿಷ್ಠಾವಂತ ವಿದ್ಯಾರ್ಥಿಗಳಾಗಿ ಕ್ರಿಯಾಶೀಲರಾಗಿದ್ದರು. ಮಾಗಡಿ ತಾಲ್ಲೂಕಿನ ಪಾಲನಹಳ್ಳಿ ಗ್ರಾಮದಲ್ಲಿ ಜನಿಸಿ ಬೆಂಗಳೂರಿನ ರೇಣುಕಾಚಾರ್ಯ ಕಾಲೇಜಿನಲ್ಲಿ ಸೇವೆಸಲ್ಲಿಸಿ ಶ್ರೀ ಸಿದ್ಧಗಂಗಾ ಕಾಲೇಜಿನಲ್ಲಿ ೨೮ ವರ್ಷಗಳಿಂದ ಸೇವೆಸಲ್ಲಿಸುತ್ತ ಬಂದಿದ್ದ ಶ್ರೀಯುತರು ಅಪಾರ ಬಂಧುವರ್ಗದವರನ್ನು ಅಭಿಮಾನಿಗಳನ್ನು, ವಿದ್ಯಾರ್ಥಿಗಳನ್ನು ಅಗಲಿದ್ದಾರೆ. ಶ್ರೀಯುತರ ಆತ್ಮಕ್ಕೆ ಬಸವಾದಿ ಶರಣರು ಮತ್ತು ಶ್ರೀ ಸಿದ್ಧಗಂಗಾ ಗುರುಪರಂಪರೆ ಚಿರಶಾಂತಿಯನ್ನು ನೀಡಲೆಂದು ಆಶಿಸುತ್ತದೆ. ಕುಟುಂಬ ವರ್ಗದವರಿಗೆ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಆಶೀರ್ವದಿಸಲೆಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

# ಸಿದ್ಧಗಂಗಾ ಮಠದಲ್ಲಿ ನಡೆದ ಸ್ವಾತಂತ್ರ್ಯೋತ್ಸವದ ವರದಿ




ಶ್ರೀ ಸಿದ್ಧಗಂಗಾ ಮಠದಲ್ಲಿ ಸ್ವಾತಂತ್ರ್ಯ ದಿನಾಚರಣೆ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ. ವೇದಿಕೆಯಲ್ಲಿ : ಶ್ರೀ ಜಿ.ಎಂ. ಶ್ರೀನಿವಾಸಯ್ಯ ಉಪಸ್ಥಿತರಿದ್ದರು.



ಶ್ರೀಮಠದ ಕಿರಿಯ ಶ್ರೀಗಳಾದ ಪರಮಪೂಜ್ಯ ಸಿದ್ದಲಿಂಗ ಸ್ವಾಮಿಗಳವರಿಂದ ಸದಾಶಯ ನುಡಿ

ದಿನಾಂಕ ೧೫.೮.೨೦೦೫ರಂದು ಸ್ವಾತಂತ್ರ್ಯೋತ್ಸವವನ್ನು ವೈಶಿಷ್ಟ್ಯಪೂರ್ಣವಾಗಿ ಆಚರಿಸಲಾಯಿತು. ಪರಮ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ದಿವ್ಯ ಸಾನಿಧ್ಯವಹಿಸಿ ಆಶೀರ್ವದಿಸುತ್ತಾ ಇಂದು ರಾಷ್ಟ್ರದಲ್ಲಿ ಸ್ವೇಚ್ಛಂದ ಪ್ರವೃತ್ತಿ ಜಾಸ್ತಿಯಾಗುತ್ತಿದೆ. ಯೋಚನಾ ಶಕ್ತಿ ಕುಂದುತ್ತಿದೆ. ನಮಗೆ ಅನೇಕ ಮಹಾತ್ಮರ ತ್ಯಾಗ ಬಲಿದಾನದಿಂದ ಸ್ವಾತಂತ್ರ್ಯ ಲಭಿಸಿತು, ಯುಗಪುರುಷ ಮಹಾತ್ಮಗಾಂಧೀಜಿ ತಮ್ಮ ಬದುಕನ್ನೇ ಮುಡುಪಾಗಿಟ್ಟರು. ಸ್ವಾತಂತ್ರ್ಯ ಬಂದು ನಮಗೆ ಬಾಳ್ವೆ ನಡೆಸುವ ಹಕ್ಕು ಬಂತು. ದಾಸ್ಯತ್ವದ ಅನುಭವ ಇಂದಿನ ಪೀಳಿಗೆಯವರಿಗಿಲ್ಲ. ಅದನ್ನು ಅನುಭವಿಸಿದವರಿಗೆ ಅದರ ಅರಿವಾಗುತ್ತದೆ.

ಇಂದು ಜಗತ್ತು ಅಗಾಧವಾದ ವಿಜ್ಞಾನ ಬೆಳವಣಿಗೆಯಿಂದ ಸಂಕುಚಿತವಾಗಿದೆ, ಭೋಗ ಜೀವನಕ್ಕೆ ದಾರಿ ಮಾಡಿಕೊಟ್ಟಿದೆ. ನಮ್ಮ ಸಂಸ್ಕೃತಿ, ಪರಂಪರೆಗಳು ಕಣ್ಮರೆಯಾಗುತ್ತಿವೆ. ಇದು ಅತ್ಯಂತ ವಿಷಾದನೀಯ. ಇಂದು ಭ್ರಷ್ಟಾಚಾರ ತಾಂಡವವಾಡುತ್ತಿದೆ. ಹಿಂಸೆಯನ್ನು ವೈಭವೀಕರಿಸಲಾಗುತ್ತಿದೆ. ಇದು ಶುಭ ಸೂಚನೆಯಲ್ಲ, ಈ ದೇಶವನ್ನು ಆಳುವ ನಾಯಕ ಜ್ಞಾನಿಯಾಗಿರಬೇಕು. ನಮ್ಮ ಸಂಸ್ಕೃತಿ ಪರಂಪರೆಯನ್ನು ಅರಿತವರಾಗಿರಬೇಕು ಮತ್ತು ಅಕಳಂಕ ವ್ಯಕ್ತಿತ್ವ ಹೊಂದಿರಬೇಕು.

ಭಾರತೀಯರಲ್ಲಿ ತಮ್ಮದೆ ಆದ ಪರಂಪರೆ, ವಿಭಿನ್ನ ಧರ್ಮ ಸಂಸ್ಕೃತಿ ಇವೆ. ಏಿತ್ರ ಎಲ್ಲಾ ಒಟ್ಟಾಗಿ ಬಾಳ್ವೆ ಮಾಡುತ್ತಿದ್ದಾರೆ. ಈ ಗುಣ ಬೇರೆ ರಾಷ್ಟ್ರಗಳಲ್ಲಿ ಗೋಚರವಾಗುವುದಿಲ್ಲ ರವೀಂದ್ರರ ಮಾತು ಇಲ್ಲಿ ಸ್ಮರಣೀಯ ''ವಿಶ್ವ ಭ್ರಾತೃತ್ವವನ್ನು ವಿಶ್ವಕುಟುಂಬವನ್ನು ಕಾಪಾಡುವ ಶಕ್ತಿಯನ್ನು ಪರಮಾತ್ಮ ಭರತಖಂಡಕ್ಕೆ ಮಾತ್ರ ನೀಡಿದ್ದಾನೆ''. ನಮಗೆ ಸಂಸ್ಕಾರವಿದೆ. ನೀತಿ ಇದೆ. ಆಧ್ಯಾತ್ಮಿಕ ತತ್ವವೇ ಜೀವನದ ಬುನಾದಿ. ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ಭಾರತೀಯತ್ವ ಅರಳ ಬೇಕು.

ಸ್ವಾತಂತ್ರ್ಯವೆಂದರೆ, ಹಿಂಸೆಯಿಂದಾಗಲಿ, ಭಯದಿಂದಾಗಲಿ ಜೀವಿಸುವುದಲ್ಲ, ಆದರೆ ಅಂದು ಆ ವಾತಾವರಣದಲ್ಲಿ ಮಹಾತ್ಮಾಜಿಯವರು ದಕ್ಷಿಣ ಆಫ್ರಿಕಾದಲ್ಲಿ ಪಟ್ಟ ಹಿಂಸೆ, ನೋವು, ಅಪಮಾನಗಳಿಂದ ಅವರು ಭಾರತಕ್ಕೆ ಹಿಂದಿರುಗಿ ಬರುವಂತಾಯಿತು. ಅವರ ಸ್ವಾತಂತ್ರ್ಯ ಹೋರಾಟದ ಮುಂಚೂಣಿಯಲ್ಲಿ ನಿಂತರು. ಅವರ ಆಧ್ಯಾತ್ಮ ಮತ್ತು ನೈತಿಕ ಶಕ್ತಿಯಿಂದ ಬ್ರಿಟೀಷರು ಸ್ವಾತಂತ್ರ್ಯವನ್ನು ಅವರ ಪದತಲದಲ್ಲಿ ಅರ್ಪಿಸಿದರು, ಭಾರತೀಯರ ಆತ್ಮ ಶಕ್ತಿ ಎಷ್ಟು ಅಗಾಧವಾದುದು ಎನ್ನುವುದಕ್ಕೆ ಈ ಒಂದು ಕಥೆ ನೆನಪಾಗುತ್ತದೆ.

ವಿಶ್ವಾಮಿತ್ರ ರಾಜರ್ಷಿಯಾಗಿದ್ದ, ಒಂದು ದಿನ ಸಕಲ ಪರಿವಾರ ಸೈನ್ಯ ಸಮೇತನಾಗಿ ವಶಿಷ್ಠರ ಆಶ್ರಮವನ್ನು ಪ್ರವೇಶಿಸಿದ, ಅಲ್ಲಿ ಎಲ್ಲರಿಗೂ ಅವರವರಿಗಿಷ್ಟವಾದ ಆತಿಥ್ಯ ದೊರೆಯಿತು, ವಿಶ್ವಾಮಿತ್ರನಿಗೆ ಆಶ್ಚರ್ಯವಾಗಿ ನಾನು ಒಂದು ದೇಶದ ರಾಜನಾಗಿ ಇಷ್ಟೊಂದು ಜನಗಳಿಗೆ ಆತಿಥ್ಯವನ್ನು ಮಾಡುವುದಕ್ಕೆ ಸಾಧ್ಯವಿಲ್ಲ, ಅರಣ್ಯದಲ್ಲಿರುವ ಈ ವಶಿಷ್ಠಮುನಿಗೆ ಹೇಗೆ ಸಾಧ್ಯ ಎಂದು ಕುತೂಹಲಿಯಾಗಿ ವಿಚಾರಿಸಿದ. ಅವರ ಬಳಿ ಕಾಮಧೇನು ವಿನ ಮಗಳಾದ ನಂದಿನಿಧೇನುವು ಇರುವುದು ತಿಳಿಯಿತು. ಇಷ್ಟೆಲ್ಲಾ ಅದರ ಮಹಿಮೆಯಿಂದ ಸಾಧ್ಯ ಎಂಬುದನ್ನು ತಿಳಿದ ವಿಶ್ವಾಮಿತ್ರ ವಶಿಷ್ಠರನ್ನು ಕೇಳಿದರು, ನಾನು ಈ ದೇಶದ ರಾಜ ಇಂಥಾ ಅಮೂಲ್ಯ ಸಂಪತ್ತು ರಾಜನಿಗೆ ಸೇರಬೇಕಾದ್ದು ಇದನ್ನು ನನಗೆ ಕೊಟ್ಟು ಬಿಡು ಎಂದರು. ಅದಕ್ಕೆ ವಶಿಷ್ಠ ಒಪ್ಪಲಿಲ್ಲ. ಆಗ ವಿಶ್ವಾಮಿತ್ರ ನಾನು ಕ್ಷತ್ರಿಯ ಯುದ್ಧ ಮಾಡಿ ಪಡೆಯುವ ಸಾಮರ್ಥ್ಯ ನನಗೆ ಉಂಟು, ಯುದ್ಧ ಮಾಡಿ ಪಡೆಯುತ್ತೇನೆಂದರು. ಆಗ ವಶಿಷ್ಠರು ತಮ್ಮ ಯೋಗದಂಡವನ್ನು ಮಂತ್ರಿಸಿಟ್ಟು ಧ್ಯಾನದಲ್ಲಿ ತೊಡಗಿದರು. ವಿಶ್ವಾಮಿತ್ರನ ಸೈನಿಕರು ಬಿಟ್ಟ ಸಹಸ್ರ-ಸಹಸ್ರ ಬಾಣಗಳೆಲ್ಲಾ ಆ ಯೋಗದಂಡದ ಮುಂದೆ ಅಶಕ್ತವಾದವು, ಸ್ವಯಂ ವಿಶ್ವಾಮಿತ್ರನೆ ಪ್ರಯತ್ನ ಪಟ್ಟ ಆತನ ಆಟಸಾಗಲಿಲ್ಲ, ಕೊನೆಗೆ ''ಕ್ಷತ್ರಿಯ ಬಲಂ ಧಿಕ್‌ಬಲಂ , ಬ್ರಹ್ಮತೇಜೋ ಬಲಂ ಬಲಮ್''.

ಏಕೇನ ಬ್ರಹ್ಮದಂಡೇನ ಸರ್ವ ಅಸ್ತ್ರಾಣಿ ಹತಾನಿಚ'' (ಒಂದು ಬ್ರಹ್ಮದಂಡದ ಮುಂದೆ ಎಲ್ಲಾ ಅಸ್ತ್ರಗಳು ನಾಶವಾದವು. ಈ ಕ್ಷತ್ರಿಯ ಬಲಕ್ಕೆ ಧಿಕ್ಕಾರವಿರಲಿ, ಬ್ರಹ್ಮ ತೇಜಸ್ಸೇ ನಿಜವಾದ ಬಲ ಎಂಬನು).

ಆದ್ದರಿಂದ ಭಾರತೀಯರ ಆಧ್ಯಾತ್ಮ ಸಂಪತ್ತು ಅಗಾಧವಾದುದು ಎಂಥಾ ಸಂದರ್ಭದಲ್ಲಿಯೂ ಅದು ಈ ದೇಶವನ್ನು ಕಾಪಾಡಿದೆ.

ಸ್ವಾತಂತ್ರ್ಯ ಎಂಬುದು ಬರಿ ಮಾನವನಿಗೆ ಮಾತ್ರವಲ್ಲ ಅದು ಎಲ್ಲಾ ಪ್ರಾಣಿ, ಪಶು, ಪಕ್ಷಿಗಳಿಗೂ ಬೇಕಾದ್ದು ''ವನದ ಕೋಗಿಲೆ ಮನೆಗೆ ಬಂದರೆ, ವನವ ನೆನೆವುದ ಮಾಬುದೆ'' ಎಂಬ ಅಕ್ಕನ ವಚನವನ್ನು ಸ್ಮರಿಸಬಹುದು. ಈ ಸ್ವಾತಂತ್ರ್ಯವನ್ನು, ಸಮಾಜವನ್ನು ರಕ್ಷಿಸುವ ಜವಾಬ್ದಾರಿ, ತಾಯಿ ಮತ್ತು







ಶ್ರೀಮಠದ ಆವರಣದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರ ನೇತೃತ್ವದಲ್ಲಿ ಧ್ವಜಾರೋಹಣ

ಉಪಾಧ್ಯಾಯರ ಮೇಲಿದೆ ಅವರು ತಮ್ಮ ಜವಾಬ್ದಾರಿಯನ್ನು ಅರಿತು ಕಾರ್ಯ ಮಾಡಬೇಕು ಸ್ವಾತಂತ್ರ್ಯವೆಂದರೆ ಸ್ವಚ್ಛಂದತೆಯಲ್ಲ. ಅದಕ್ಕೆ ತನ್ನದೆ ಪಾವಿತ್ರ್ಯವಿದೆ, ಪ್ರಜಾಪ್ರಭುತ್ವವೆಂದರೆ, ಇಟಲಿಯನ್ನು ಒಗ್ಗೂಡಿಸಿದ ಮಹಾನುಭಾವ ಮ್ಯಾಝಿನಿಯ ಒಂದು ಮಾತು ಸ್ಮರಣೀಯ, ''ಎಲ್ಲರಿಗೂ ಊಟ, ಬಟ್ಟೆ, ವಸತಿ ಈ ಮೂರು ಪರಿಪೂರ್ಣವಾಗಿ ದೊರಕಿ, ಪ್ರತಿಯೊಬ್ಬರು ದುಡಿಮೆಯಿಂದ ಬಾಳ್ವೆ ನಡೆಸುವಂತಾಗಬೇಕು'', ಈ ದೃಷ್ಟಿಯಲ್ಲಿ ಬಸವಣ್ಣನವರ ಕಾಯಕ ತತ್ವ ಈ ಎಲ್ಲಾ ಸಮಸ್ಯೆಗೂ ರಾಮಬಾಣವಾಗಬಲ್ಲದು. ಎಂದು ಆಶೀರ್ವಚನ ನೀಡಿದರು.

ಪರಮ ಪೂಜ್ಯ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗಸ್ವಾಮೀಜಿಯವರು ಸದಾಶಯ ನುಡಿಗಳನ್ನಾಡುತ್ತಾ, ಪ್ರಾಚೀನ ಭಾರತ ಜಗತ್ತಿನಲ್ಲಿಯೆ ಎಲ್ಲಾ ರಂಗದಲ್ಲಿಯೂ ಮುಂಚೂಣಿಯಲ್ಲಿತ್ತು. ಜಗತ್ತಿನ ಮೊಟ್ಟಮೊದಲ ಶಸ್ತ್ರವೈದ್ಯ ಶುಶ್ರುತ, ಕೂದಲನ್ನು ಸೀಳುವಂತ ಆಯುಧಗಳಿದ್ದವು, ಕಣಾದನ ಸಂಖ್ಯಾಶಾಸ್ತ್ರ ಒಂದು ಬೆಂಕಿ ಪೆಟ್ಟಣದಲ್ಲಿ ಮಡಿಚಿಡುವ ಸೀರೆಗಳ ನೇಯ್ಗೆ ಮಾಡುತ್ತಿದ್ದರು. ಖಗೋಳಶಾಸ್ತ್ರದಲ್ಲಿ ಅದ್ಭುತ ವಿಚಾರ ಮನಗಂಡಿದ್ದರು. ಹತ್ತು ಸಾವಿರ ವರ್ಷಗಳಲ್ಲಿ ಭಾರತೀಯರು ಯಾವುದೇ ರಾಷ್ಟ್ರದ ಮೇಲೆ ತಾನಾಗಿ ಯುದ್ಧ ಮಾಡಿದ ಉದಾಹರಣೆಗಳಿಲ್ಲ. ಪಶು ಪಕ್ಷಿಗಳಲ್ಲಿಯೂ ದೈವತ್ವವನ್ನು ಕಂಡವರು ಭಾರತೀಯರು. ಬ್ರಿಟೀಷರು ಭಾರತಕ್ಕೆ ಬಂದಾಗ ಜಗತ್ತಿನ ಸಂಪತ್ತಿನಲ್ಲಿ ಶೇ ೨೫ರಷ್ಟು ಭಾರತೀಯರದಾಗಿತ್ತು, ಅವರು ಈ ದೇಶವನ್ನು ಬಿಟ್ಟು ಹೋಗುವಾಗ ಶೇ ೨ (ಎರಡು) ರಷ್ಟು ಮಾತ್ರ ಇತ್ತು.

ಆದ್ದರಿಂದ ನಮ್ಮವರು ಕಷ್ಟಪಟ್ಟುಗಳಿಸಿರುವ ಈ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಪಣ ತೊಡಬೇಕಾಗಿದೆ. ಪ್ರತಿಯೊಬ್ಬರು ಅವರವರ ಕ್ಷೇತ್ರದಲ್ಲಿ ನಿಷ್ಠೆ ಪ್ರಾಮಾಣಿಕವಾಗಿ ದುಡಿದಿದ್ದೇ ಆದರೆ ರಾಷ್ಟ್ರ ಹಿಂದಿನ ಗತ ವೈಭವವನ್ನು ಮತ್ತೊಮ್ಮೆ ಕಾಣಬಹುದಾಗಿದೆ ಎಂದು ಆಶಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಸನ್ಮಾನ್ಯ ಜಿ.ಎಮ್. ಶ್ರೀನಿವಾಸಯ್ಯನವರು ಮಾತನಾಡುತ್ತಾ ನಾವು ಬೇರೆಯವರಿಗೆ ದೈಹಿಕ ಮಾನಸಿಕ ಹಿಂಸೆಯನ್ನು ನೀಡದಿರುವುದೇ ಸ್ವಾತಂತ್ರ್ಯ, ಸ್ವಾತಂತ್ರ್ಯ ಯಾರಿಗೆ



ಶ್ರೀಮಠದ ವಿದ್ಯಾರ್ಥಿಗಳಿಂದ ಪಥಸಂಚಲನ



ಜಿಲ್ಲಾಧಿಕಾರಿಗಳಾದ ಶ್ರೀ ಎಸ್. ಆರ್. ಉಮಾಶಂಕರ್ ಅವರಿಂದ ಭಾಷಣ



ಜಿಲ್ಲಾ ಮಂತ್ರಿಗಳಾದ ಶ್ರೀ ಸಿ. ಚನ್ನಿಗಪ್ಪ ಅವರಿಂದ ಭಾಷಣ

ಬಂದಿದೆ? ರಾಜಕಾರಿಣಿಗಳಿಗೆ, ಭ್ರಷ್ಟಚಾರಿಗಳಿಗೆ ಬಂದಿದೆ, ಜನ ಸಂತೋಷ ನೆಮ್ಮದಿಯಿಂದ ಬಾಳದಂತಾಗಿದೆ. ಮನಸ್ಸಿನ ಸ್ವಾರ್ಥದಿಂದ ಸಮಾಜದಲ್ಲಿ ಕ್ಷೋಭೆಯುಂಟಾಗಿದೆ. ಭ್ರಷ್ಟಾಚಾರದ ಬಗ್ಗೆ ಈ ದೇಶದಲ್ಲಿ ಮತ್ತೊಮ್ಮೆ ಆಂದೋಳನ ನಡೆಯಬೇಕು. ಪೂಜ್ಯ ಸ್ವಾಮೀಜಿಯಂತವರು ಅದರ ನೇತೃತ್ವವಹಿಸಬೇಕು. ಬ್ರಿಟೀಷರು ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮ ಸಂಪತ್ತನ್ನು ದೋಚಿದರು. ಈಗ ನಮ್ಮವರೆ ನಮ್ಮ ಸಂಪತ್ತನ್ನು ದೋಚುತ್ತಿದ್ದಾರೆ. ಜಾಗತಿಕರಣದಿಂದ ಮಲ್ಟಿನ್ಯಾಷನೆಲ್ ಕಂಪನಿಗಳು ತಲೆ ಎತ್ತಿವೆ. ನಾವೆಲ್ಲಾ ಅವರುಗಳ ದಾಸರಾಗುತ್ತಿದ್ದೇವೆ. ಇದರ ಬಗ್ಗೆ ನಾವೆಲ್ಲ ಜಾಗೃತರಾಗಬೇಕು ಎಂದು ಆಶಿಸಿದರು.

ಜಿಲ್ಲಾಧಿಕಾರಿಗಳಾದ ಶ್ರೀ ಎಸ್.ಆರ್. ಉಮಾಶಂಕರ್‌ರವರು ಸ್ವಾತಂತ್ರ್ಯಾ ನಂತರದ ಭಾರತದ ಪ್ರಗತಿಯ ಚಿತ್ರವನ್ನು ಬಿಚ್ಚಿಟ್ಟರು.

ಧ್ವಜಾರೋಹಣ ಮಾಡಿ ವಂದನೆ ಸ್ವೀಕರಿಸಿದ ಮಂತ್ರಿವರ್ಯರಾದ ಸನ್ಮಾನ್ಯ ಶ್ರೀ ಚೆನ್ನಗಪ್ಪನವರು ಪೂಜ್ಯರ ಸೇವೆ, ಅವರ ಮಾರ್ಗದರ್ಶನ ಸದಾಕಾಲ ನಮಗೆ ದೊರೆಯುವಂತಾಗಲಿ ಎಂದರು.

ಆಕರ್ಷಕ ಪಥ ಸಂಚಲನ, ಸಾಮೂಹಿಕ ಕವಾಯಿತು ಮತ್ತು ಸಾಂಸ್ಕೃತಿಕ ಮನರಂಜನಾ ಕಾರ್ಯಕ್ರಮಗಳು ನಡೆದವು. ಶಿವಕುಮಾರ್ ಪ್ರಾರ್ಥನೆ ಸಲ್ಲಿಸಿದರು. ಶ್ರೀ ಜಿ. ಗವಿಸಿದ್ಧಯ್ಯನವರು ಸ್ವಾಗತಿಸಿದರು ಶ್ರೀ ಜಿ.ಹೆಚ್. ಗಂಗಾಧರಯ್ಯನವರು ವಂದಿಸಿದರು ಶ್ರೀ ಡಿ.ಎಸ್. ನಾಗರಾಜು ಕಾರ್ಯಕ್ರಮ ನಿರೂಪಿಸಿದರು.

ದಿನಾಂಕ ೧೯-೨೦-೨೧ರ ಆಗಸ್ಟ್ ತಿಂಗಳಲ್ಲಿ ಮೂರು ದಿನಗಳ ಕಾಲ", ಲೀಡರ್ಸ್ ಅಕಾಡೆಮಿ ಫಾರ್ ಪರ್ಸನಲ್ ಸಕ್ಸ್ ಸ್ (ಲ್ಯಾಪ್ಸ್)" ಎಂಬ ಸಂಸ್ಥೆಯ ಮುಖೇನ ತರಬೇತಿಯನ್ನು ಏರ್ಪಡಿಸಿದ್ದರು. ಇದರಲ್ಲಿ ನಮ್ಮ ಸಂಸ್ಥೆಯ ಎಲ್ಲಾ ಉಪಾಧ್ಯಾಯರುಗಳು ಭಾಗವಹಿಸಿ ವಿಶೇಷವಾದ ಜ್ಞಾನ ಸಂಪತ್ತನ್ನು ಪಡೆದರು.

ಈ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರು ಉಪಾಧ್ಯಾಯರಾದವರು ನಿಜವಾದ ವಿದ್ಯಾರ್ಥಿಗಳಾಗುವುದು ಆ ವೃತ್ತಿಗೆ ಸೇರಿದ ಮೇಲೆ, ನಾವು ಎಷ್ಟೆ ಪರಿಪೂರ್ಣವೆನಿಸಿದರು ಕಲಿಯುವುದು ಅಗಾಧವಾಗಿರುತ್ತದೆ. "ಬಾಲಾದಪಿ ಶುಕಾದಪಿ" ಅದು ಬಾಲ ಭಾಷೆಯಾಗಿರಬಹುದು ಅಥವಾ ಗಿಳಿ ಭಾಷೆಯೆ ಆಗಿರಬಹುದು, ನಾವು ಯಾವುದನ್ನು ಉದಾಸೀನ ಮಾಡಬಾರದು "ಕೆಲವಂ ಬಲ್ಲವರಿಂದ ಕಲ್ತು, ಕೆಲವಂ ಶಾಸ್ತ್ರಂಗಳಂ ಕೇಳುತಂ" ಎನ್ನುವ ಸೋಮೇಶ್ವರನ ಮಾತಿನಂತೆ ಎಲ್ಲರಿಂದ ತಿಳಿಯುತ್ತಾ ಹೋಗಬೇಕು. ಈ ದೃಷ್ಟಿಯಲ್ಲಿ ಈ ಶಿಬಿರ ಮಾರ್ಗದರ್ಶಿಯಾಗಲಿ ಎಂದು ಆಶಿಸಿದರು.

ತರಬೇತುದಾರರಾದ ಕೇರಳದ ವಿ. ಬಾಲಕೃಷ್ಣನ್ ರವರು, ಮಾತನಾಡಿ ಮನಸಿದ್ದರೆ ಮಾರ್ಗ ಇದ್ದೇ ಇರುತ್ತದೆ ಯಾವುದಕ್ಕೂ ಈ ಮನಸ್ಸೆ ಕಾರಣ ಈ ಮನಸ್ಸು ಜಾಗ್ರತ, ಸುಪ್ತಾ, ಸುಸುಪ್ತಾ ಎಂಬ ಮೂರು ಅವಸ್ಥೆಯಲ್ಲಿರುತ್ತದೆ. ಸ್ಮರಣ ಶಕ್ತಿ ಕುಂಠಿತವಾಗಲು ಇದೇ ಕಾರಣ. ನಾನು ಕೂಡ ಬಡತನದಿಂದ ಮೇಲೆ ಬಂದವನು. ಅದಕ್ಕೆ ಶ್ರದ್ಧೆ, ಛಲ, ಗುರಿ ಎಲ್ಲವೂ ಬೇಕಾಗುತ್ತದೆ. ಈ ದಿಶೆಯಲ್ಲಿ ನೀವು ಕಾರ್ಯಪ್ರವೃತ್ತರಾಗಬೇಕೆಂದರು. ಪ್ರಾರಂಭದಲ್ಲಿ ಸಂಸ್ಥೆಯ ವಿದ್ಯಾಧಿಕಾರಿಗಳಾದ ಸಿ.ಎಸ್. ಸಿದ್ಧಲಿಂಗಯ್ಯನವರು ಪ್ರಸ್ತಾವಿಕ ನುಡಿಗಳನ್ನಾಡಿ ಸರ್ವರನ್ನು ಸಭೆಗೆ ಸ್ವಾಗತಿಸಿದರು. ಈ ಕಾರ್ಯಗಾರದಲ್ಲಿ ೧೫೦೦ ಉಪಾಧ್ಯಾಯರು ಸಾವಿರ ವಿದ್ಯಾರ್ಥಿಗಳು ಭಾಗವಹಿಸಿ ಪ್ರಯೋಜನ ಪಡೆದರು.

ದಿನಾಂಕ ೫.೯.೨೦೦೫ರ ಸೋಮವಾರದಂದು ಪರಮಪೂಜ್ಯ ಶ್ರೀ ಶ್ರೀಗಳವರ ಅಮೃತ ಮಹೋತ್ಸವ ದತ್ತಿ





ಉಪನ್ಯಾಸ ಮಾಲಿಕೆ ತದಂಗವಾಗಿ ಲಿಂಗೈಕ್ಯ ಶರಣಬಂಧು ಸಾಗರನ ಹಳ್ಳಿ ರೇವಣ್ಣನವರ ವಿಚಾರಧಾರೆಗಳ ರಸ ನಿಮಿಷದ ಕಾರ್ಯಕ್ರಮ ಜರಗಿತು.

ಬೆಂಗಳೂರಿನ ನಿವೃತ್ತ ಪ್ರಾಧ್ಯಾಪಕ ಪ್ರೊ|| ಜಿ.ಹೆಚ್. ಹನ್ನೆರಡು ಮಠ ಅವರು ಉಪನ್ಯಾಸ ನೀಡಿ, ಇಂದು ಪವಿತ್ರ ಪುಣ್ಯದಿನ ಸದುವಿನಯದ ಸೇವಾಧುರೀಣ, ಭ್ರಷ್ಟರಾಜಕೀಯವನ್ನು ಮೆಟ್ಟಿನಿಂತ ಬಸವ ಸಿದ್ಧಾಂತದ ಲಿಂಗೈಕ್ಯ ರೇವಣ್ಣನವರದು ಐಕ್ಯೋತ್ಸವ, ಲೋಕಗುರು ಎಂಬ ಕೀರ್ತಿಗೆ ಭಾಜನರಾದ ಸರ್ವರಲ್ಲಿ ಡಾ|| ರಾಧಾಕೃಷ್ಣನ್ ರವರ ಜನ್ಮೋತ್ಸವ, ರೇವಣ್ಣನವರು ಮಣ್ಣಿನ ಸೊಗಡಿನಲ್ಲಿ ಬೆರತವರು, ಬೆವರಿನಿಂದ ಬಂದವರು, ರೈತಾಪಿ ಕುಟುಂಬದಿಂದ ಬಂದವರು. ಆದರೆ ಇಂದು ಪ್ಲಾಸ್ಟಿಕ್ ಯುಗವಾಗಿ ನಮ್ಮಲ್ಲಿ ಬೆವರಿನ ಸಂಸ್ಕೃತಿಯೆ ಇಲ್ಲವಾಗಿದೆ. ಶರಣ ಸಿದ್ಧಾಂತ ಬದುಕಿನ ಸಿದ್ಧಾಂತ, "ನಾಳೆಬಪ್ಪುದು ಇಂದೇ ಬರಲಿ, ಇಂದು ಬಪ್ಪುದು ಈಗಲೇ ಬರಲಿ", ಜಾತಸ್ಯ ಮರಣ ಧೃವಂ" ಎಂದು ನಂಬಿದವರು, ಅವರ ಬದುಕು ಉಜ್ವಲವಾದುದು, ಅನೇಕ ಕಷ್ಟಗಳನ್ನು, ಕಣ್ಣೀರನ್ನು ಎದುರಿಸಿ ಬದುಕನ್ನು ನಡೆಸಿದವರು.

ರೇವಣ್ಣನವರು ಹುಟ್ಟಿದ ಪರಿಸರವಾದರೋ ಎಂಥಹದು ಗುಣರತ್ನ ಮಾಲೆ ಭಾಷ್ಯವನ್ನು ಬರೆದ ಅಮರಗೊಂಡ ಮಲ್ಲಿಕಾರ್ಜುನ, ಕೇಶಿರಾಜನ ಶಬ್ದಮಣಿದರ್ಪಣಕ್ಕೆ ಟೀಕೆಯನ್ನು ಬರೆದ ನಿಟ್ಟೂರಿನ ನಂಜಯ್ಯ, ಗುಬ್ಬಿಯ ಚೆನ್ನಬಸವೇಶ್ವರರಂತಹವರು ತಪವ ಗೈದ ಪುಣ್ಯ ಭೂಮಿಯ ಸನಿಹದಲ್ಲಿ ರೇವಣ್ಣನವರ ಪೂರ್ವಜರು ಬಡಕುಟುಂಬದವರು, ವ್ಯಾಪಾರಿಗಳ ಜೊತೆ ಜೀವನ ಸವೆಸಿದರು ದುಡುಮೆಯಿಂದ ಬದುಕನ್ನು ರೂಪಿಸಿಕೊಂಡವರು. ಅವಿಭಕ್ತ ಕುಟುಂಬ, ಇಂಥಾ ಒಂದು ವಾತಾವರಣದಲ್ಲಿ ೧೯೧೨ರ ಆಗಸ್ಟ್ ೨೦ರಂದು ಜನಿಸಿದರು. ಆಗ ಕನ್ನಡನಾಡಿನಲ್ಲಿ ಪೂಜ್ಯ ಶಿವಕುಮಾರ ಸ್ವಾಮಿಗಳಂಥವರು ಅಥಣಿ ಶಿವಯೋಗಿಗಳು, ಹಾನಗಲ್ಲ ಕುಮಾರ ಸ್ವಾಮಿಗಳಂಥ ಸದ್ಗುರುಗಳು, ನಿಜಲಿಂಗಪ್ಪ, ಜತ್ತಿ, ಕಂಠಿಯವರಂತ ರಾಜಕಾರಣಿಗಳು ಇಂಥಾ ಮಹಾತ್ಮರ ಆದರ್ಶಗಳು ಅವರ ಬದುಕಿನಲ್ಲಿ ಅಡಕವಾಗಿದ್ದವು.

ರೇವಣ್ಣನವರ ಮೇಲೆ ಬಸವಣ್ಣನವರ ಪ್ರಭಾವವು ಅಡಕವಾಗಿತ್ತು. ಬಸವಣ್ಣ ಅಪ್ಪಿಕೊಂಡ ಧರ್ಮವೆಂದರೆ ಕೆಳಗೆ ಬಿದ್ದವರನ್ನು, ತುಳಿತಕ್ಕೆ ಒಳಗಾದವರನ್ನು ಮೇಲೆತ್ತಿದ ಧರ್ಮವೆಂದರೆ ಈ ಪೃಥ್ವಿಯೊಳಗೆ ವೀರಶೈವಧರ್ಮವೊಂದೇ - ಸೂಳೆ ಸಂಕವ್ವೆಯ್ಯನಂತವಳನ್ನು ನೈಜ ಜೀವನಕ್ಕೆ ತಂದ ಧರ್ಮ. ಚೋಳ ಚಿಕ್ಕಯ್ಯಕಲ್ಲನ್ನು ಲಿಂಗವೆಂದು ಕಟ್ಟಿಕೊಂಡು ಬಸವಣ್ಣನ ಮಹಾಮನೆಗೆ ಬಂದಾಗ ಕಳ್ಳ ಕಳ್ಳ ಎಂದು ಕೂಗುತ್ತಾರೆ. ಆಗ ಬಸವಣ್ಣನವರು ಬಂದು ಆತನನ್ನು ಅಪ್ಪಿಕೊಂಡು ಈ ಲೋಕದೊಳಗೆ ಲಿಂಗವನ್ನು ಕಟ್ಟಿಕೊಂಡು ಕಲ್ಲೆಂದು ಭಾವಿಸಿದರಿದ್ದಾರೆ. ನೀನು ಕಲ್ಲನ್ನೆ ಲಿಂಗವೆಂದು ಭಾವಿಸಿದವನು ನಿಜವಾಗಿಯೂ ನೀನು ಶ್ರೇಷ್ಠಶರಣ ತಕ್ಷಣವೇ ಆತನ ಮನದೊಳಗಿದ್ದ ಅವಗುಣಗಳೆಲ್ಲಾ ಅಳಿದು ಹೋಗುತ್ತವೆ.

ವಚನ ಸಾಹಿತ್ಯ ನಿಜವಾದ ಕನ್ನಡ ಸಾಹಿತ್ಯ. ಮನ ಮನಕ್ಕೆ ಮನೆಮನೆಗೆ ಮುಟ್ಟಿಸಿದ ಕೀರ್ತಿ ಶರಣರದು. ಇಂಥಾ ಒಂದು ಭಾಷೆ ಇಂದು ಜಗತ್ತಿನಲ್ಲಿ ಬಹಳ ಬೇಗ ನಶಿಸಿ ಹೋಗುತ್ತಿರುವ ಭಾಷೆ ಕನ್ನಡ. ಈ ಕಂಪ್ಯೂಟರ್ ಯುಗ ಬಂದು ಶರಣ ಸಿದ್ಧಾಂತಕ್ಕೆ ಧಕ್ಕೆಯಾಗುತ್ತಿದೆ ಎಂದು ಆತಂಕ ವ್ಯಕ್ತ ಪಡಿಸಿದರು.

ರಾಧಾಕೃಷ್ಣನ್‌ರವರ ಬಗ್ಗೆ ಮಾತನಾಡಿ, ಅವರ ಶಿಷ್ಯ ವಾತ್ಸಲ್ಯ ಅಪಾರ. ಅದಕ್ಕೆ ನಿದರ್ಶನವಾಗಿ ನನ್ನ ಮಿತ್ರ ಹಿರೇಮಠ್ ಎನ್ನುವ ಬಡ ವಿದ್ಯಾರ್ಥಿ ಧಾರವಾಡ ವಿಶ್ವವಿದ್ಯಾಲಯದಲ್ಲಿ ಅಭ್ಯಾಸ ಮಾಡುತ್ತಿದ್ದು ರಾಧಾಕೃಷ್ಣನ್ ರವರ ತತ್ವ ಶಾಸ್ತ್ರವನ್ನು ನಂಬಿದ್ದವ, ಅವುಗಳನ್ನು ಅಭ್ಯಾಸ ಮಾಡಲು ಗ್ರಂಥಗಳ ಅವಶ್ಯಕತೆ ಇತ್ತು. ಆ ವಿದ್ಯಾರ್ಥಿ ರಾಷ್ಟ್ರಪತಿಗಳಾದ ರಾಧಾಕೃಷ್ಣನ್ ರವರಿಗೆ ಪತ್ರ ಬರೆದು ತಮ್ಮ ಕೋರಿಕೆಯನ್ನು ತಿಳಿಸಿದರು. ಆಗ ರಾಧಾಕೃಷ್ಣನ್ ಆಗ ಡಿ.ಸಿ. ಪಾವಟೆಯವರಿಗೆ ಪತ್ರ ಬರೆದು ನಿಜಾಂಶ ಅರಿತು, ಪುಸ್ತಕಗಳನ್ನು ಕಳುಹಿಸುತ್ತಾರೆ. ಇಂಥಾ ಉದಾತ್ತಗುಣ ಅವರದು ಎಂದು ರಾಧಾಕೃಷ್ಣನ್‌ರವರು ಗುಣಗಾನ ಮಾಡಿದರು.

ದಿವ್ಯ ಸಾನಿಧ್ಯ ವಹಿಸಿದ್ದ ಪೂಜ್ಯ ಗುರುಗಳು ಆಶೀರ್ವಚನ ನೀಡುತ್ತಾ, ರೇವಣ್ಣನವರದು ಹಸನಾದ ಜೀವನ. ಅರ್ಥಪೂರ್ಣ ಚೇತನ, ಮುಖಂಡರು ಆತ್ಮಾವಲೋಕನ ಮಾಡಿಕೊಳ್ಳಬೇಕು ಮುಖಂಡತ್ವ ಬುದ್ಧಿವಂತರಾಗಿರಬೇಕು. ಪ್ರಾಮಾಣಿಕನಾಗಿರಬೇಕು ಚಾರಿತ್ರ್ಯವುಳ್ಳವನಾಗಿರಬೇಕು ಎಂದು ರಾಧಾಕೃಷ್ಣನ್ ಹೇಳುತ್ತಾರೆ. ಆ ಗುಣ ರೇವಣ್ಣನವರಲ್ಲಿತ್ತು. ಅಕಳಂಕ ವ್ಯಕ್ತಿತ್ವದಿಂದ ಅಕಳಂಕ ಸಮಾಜ ನಿರ್ಮಾಣ ಮಾಡಬಹುದು. ರೇವಣ್ಣನವರು ಹಣ ಮಾಡಬಹುದಾಗಿದ್ದರೆ ಶ್ರೀಮಂತರಾಗಬಹುದಾಗಿತ್ತು. ಅವರಲ್ಲಿ ಎಂದೂ ಜಾತಿಯತೆ ಸುಳಿಯಲಿಲ್ಲ ಎಲ್ಲರನ್ನೂ ಸಮಾನರನ್ನಾಗಿ ಕಾಣುತ್ತಿದ್ದರು. ಆದರ್ಶ ಜೀವನ ನಡೆಸಿದರು. ಶ್ರೀ ಮಠದ ಸೇವೆಯಲ್ಲಿ ಅಪಾರ ಆಸಕ್ತಿ. ಅನೇಕ ಸಂದರ್ಭದಲ್ಲಿ ಸಂಸ್ಥೆಗೆ ಮಾರ್ಗದರ್ಶಿಯಾಗಿದ್ದರು ಎಂದು ಸದಾಶಯವನ್ನು ವ್ಯಕ್ತಪಡಿಸಿದರು.

ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಸ್ವಾಮಿಗಳು ದಿವ್ಯಾ ಉಪಸ್ಥಿತಿಯನ್ನು ದಯಪಾಲಿಸಿದರು. ಪ್ರಾರಂಭದಲ್ಲಿ ಶ್ರೀ ಶಿವಕುಮಾರ್ ಪ್ರಾರ್ಥನೆ ಸಲ್ಲಿಸಿದರು. ಶ್ರೀ ಹೆಚ್.ವಿ. ವೀರಭದ್ರಯ್ಯನವರು ಪ್ರಸ್ತಾವಿಕ ನುಡಿಗಳನ್ನಾಡಿ ಸ್ವಾಗತ ಕೋರಿದರು. ಡಿ.ಎಸ್. ನಾಗರಾಜು ಶರಣು ಸಮರ್ಪಿಸಿದರು. ರೇವಣ್ಣನವರ ಕುಟುಂಬ ವರ್ಗದವರು ಬಂಧು ಬಳಗ ಅಪಾರ ಅಭಿಮಾನಿಗಳು ಭಾಗವಹಿಸಿದ್ದರು.

ದಿನಾಂಕ ೨೦.೮.೨೦೦೫ರ ಶನಿವಾರದಂದು ತುಮಕೂರು ಜಿಲ್ಲಾ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಮತ್ತು ಸಂಯುಕ್ತ ಪದವಿ ಪೂರ್ವ ಕಾಲೇಜುಗಳ ಪ್ರಾಚಾರ್ಯರ ಸಂಘದ ವತಿಯಿಂದ "ಶೈಕ್ಷಣಿಕ ಸಮ್ಮೇಳನ ಮತ್ತು ೧೦ನೇ ತರಗತಿಯ ಪ್ರಶ್ನೆಕೋಠಿ ಬಿಡುಗಡೆ ಸಮಾರಂಭ ನಡೆಯಿತು.

ದಿವ್ಯ ಸಾನಿಧ್ಯ ವಹಿಸಿ ಆಶೀರ್ವಚನ ನೀಡಿದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಇಂದು ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಗೆ ಅನುಗುಣವಾಗಿ ಶಿಕ್ಷಣ ಕ್ರಮ ರೂಪಿಸಬೇಕು. ಮುಖ್ಯೋಪಾಧ್ಯಾಯರು ಶಾಲೆಗಳ ಆಧಾರ ಸ್ತಂಭ. ನಿಮ್ಮ ನಡೆ, ನುಡಿ, ಆಚಾರ ವಿಚಾರಗಳು ಶುದ್ಧವಾಗಿರಬೇಕು ಎಂದು ತಿಳಿಸಿದರು.

ಉದ್ಘಾಟನೆ ಮಾಡಿದ ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ನಿರ್ದೇಶಕರಾದ ಶ್ರೀ ಟಿ.ಎಂ. ಕುಮಾರ್ ರವರು ನೂತನ ಪರೀಕ್ಷಾ ವಿಧಾನವನ್ನು ತಿಳಿಸಿ, ಇದಕ್ಕೆ ಅನುಗುಣವಾಗಿ ಮಕ್ಕಳನ್ನು ಪರೀಕ್ಷೆಗೆ ಅನುಗೊಳಿಸಬೇಕೆಂದು ಕೋರಿದರು.

ಶ್ರೀ ಎನ್. ಎಲ್. ಗಂಗಾಧರ ಗೌಡರು ಪ್ರಶ್ನೆ ಕೋಠಿಯನ್ನು ಬಿಡುಗಡೆ ಮಾಡಿದರು. ಸಾ.ಚಿ. ನಾಗೇಶ್ ರವರು ಅಧ್ಯಕ್ಷತೆ ವಹಿಸಿದರು.

ದಿನಾಂಕ ೨೮.೮.೦೫ರಂದು ಬಾದಾಮಿಯಿಂದ ಶ್ರೀ ಬಸವೇಶ್ವರ ಭಜನಾ ಮಂಡಳಿಯವರು ಶ್ರೀ ಮಠಕ್ಕೆ ಭೇಟಿ ನೀಡಿ ಭಜನಾ ಕಾರ್ಯಕ್ರಮ ನಡೆಸಿಕೊಟ್ಟರು.

ಗಣ್ಯರ ಭೇಟಿ :- ಅಗಸ್ಟ್ ತಿಂಗಳಲ್ಲಿ ಎರಡು ಭವ್ಯ ಸಮಾರಂಭಗಳು ತುಮಕೂರಿನಲ್ಲಿ ನಡೆದವು. ಒಂದು ಅಹಿಂದಾ ಸಮಾವೇಶ ಮತ್ತೊಂದು ಶೂದ್ರ ಸಮಾವೇಶ. ಈ ಸಮಾರಂಭಗಳಿಗೆ ಆಗಮಿಸಲು ಬಂದಿದ್ದ ಮಾಜಿ ಪ್ರಧಾನಿಗಳಾದ ಶ್ರೀ ಹೆಚ್.ಡಿ. ದೇವೇಗೌಡರು, ಎಂ.ಪಿ. ಪ್ರಕಾಶ್, ಬಸವರಾಜ ಹೊರಟ್ಟಿ ಮಹಿಮಾ ಪಟೇಲ್, ಚೆನ್ನಿಗಪ್ಪ, ಹೆಚ್.ಡಿ. ರೇವಣ್ಣನವರು. ಅಂತೆಯೇ ಮಾಜಿ ಉಪಮುಖ್ಯಮಂತ್ರಿ ಸಿದ್ದರಾಮಯ್ಯ, ಮಹದೇವಪ್ಪ, ಜಾರಕಿ ಹೋಳಿ ಇತ್ಯಾದಿ ಎಲ್ಲಾ ಮುಖಂಡರೆಲ್ಲಾ ಶ್ರೀ ಮಠಕ್ಕೆ ಆಗಮಿಸಿ ಗುರುಗಳ ಆಶೀರ್ವಾದ ಪಡೆದರು. ಸಮಾರಂಭಕ್ಕೆ ಆಗಮಿಸಿದ್ದ ಸಾವಿರಾರು ಕಾರ್ಯಕರ್ತರಿಗೆ ಶ್ರೀ ಮಠದಲ್ಲಿ ಪ್ರಸಾದ ವ್ಯವಸ್ಥೆ ಮಾಡಲಾಗಿತ್ತು. ಸುಮಾರು ಇಪ್ಪತ್ತು ಸಾವಿರಕ್ಕೂ ಹೆಚ್ಚು ಜನ ಶ್ರೀಮಠಕ್ಕೆ ಭೇಟಿ ನೀಡಿ ಗುರುವಿನ ದರ್ಶನ ಪಡೆದು ಪ್ರಸಾದ ಸ್ವೀಕರಿಸಿದರು.

ವರದಿ : ಡಿ.ಎಸ್. ನಾಗರಾಜು

## ಸಿದ್ಧಗಂಗಾ ಪಬ್ಲಿಕ್ ಶಾಲೆಯಲ್ಲಿ ಸಂಭ್ರಮದ ಸ್ವಾತಂತ್ರ್ಯೋತ್ಸವ



''ಮೇರೆ ದೇಶ್‌ಕಿ ಧರ್ತೀ ಸೋನಾ ಚಾಂದಿ'' ಎಂದು ದೇಶಭಕ್ತಿಯನ್ನು ಸಾರಿ ನೃತ್ಯ ಮಾಡಿದ ಸಿದ್ಧಗಂಗಾ ಪಬ್ಲಿಕ್ ಶಾಲೆಯ ಮಕ್ಕಳು

''ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸಿ'' ಎಂಬಂತೆ ಮಾತೃಭೂಮಿಯು ಗುಲಾಮಗಿರಿಯೆಂಬ ಸಂಕೋಲೆಯಿಂದ ಬಿಡುಗಡೆಗೊಂಡ ದ್ಯೋತಕವೇ ಸ್ವಾತಂತ್ರ್ಯೋತ್ಸವ ಸಂಭ್ರಮ. ಬೆಂಗಳೂರಿನ ಚಂದ್ರಾಬಡಾವಣೆಯ ಸಿದ್ಧಗಂಗಾ ಪಬ್ಲಿಕ್ ಶಾಲೆಯಲ್ಲಿ ನಡೆದ ಸ್ವಾತಂತ್ರ್ಯೋತ್ಸವ ಸಮಾರಂಭ ಅತ್ಯಂತ ವಿಶಿಷ್ಟವೂ ವೈವಿಧ್ಯಮಯವೂ ಆಗಿದ್ದಿತು. ದಿನಾಂಕ ೧೫-೮-೨೦೦೫ರ ಬೆಳಗ್ಗೆ ೯.೩೦ಕ್ಕೆ ಸರಿಯಾಗಿ ಶಾಲೆಯ ಅಧ್ಯಕ್ಷರೂ, ನಿವೃತ್ತ ಪೋಲಿಸ್ ಮಹಾನಿರ್ದೇಶಕರೂ ಆದಂತಹ ಸನ್ಮಾನ್ಯ ಶ್ರೀ ಎಲ್. ರೇವಣ್ಣಸಿದ್ದಯ್ಯನವರು ಧ್ವಜಾರೋಹಣ ಮಾಡುವುದರೊಂದಿಗೆ ಕಾರ್ಯಕ್ರಮ ಶುಭಾರಂಭಗೊಂಡಿತು. ಶಿಸ್ತಿನ ಸಿಪಾಯಿಗಳಂತೆ ಶುಭ್ರ ಶ್ವೇತ ವಸನಧಾರಿಗಳಾದ ಶಾಲೆಯಮಕ್ಕಳು ಕವಾಯತು ಪ್ರದರ್ಶನವನ್ನು ಮಾಡಿದರು. ಮಕ್ಕಳು ಸುಶ್ರಾವ್ಯವಾಗಿ ದೇವಿಯ ಪ್ರಾರ್ಥನೆ ಮಾಡಿದ ಕಾರ್ಯಕ್ರಮಕ್ಕೆ ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಚಂಪಕಮಾಲಿನಿ ರವರು ಅಧಿಕೃತವಾಗಿ ಸ್ವಾಗತ ಕೋರಿ ಸ್ವಾತಂತ್ರ್ಯ ದಿನಾಚರಣೆಯ ಬಗೆಗೆ ತಿಳಿಯಪಡಿಸಿದರು.

ಕಾರ್ಯಕ್ರಮದ ಮುಖ್ಯ ಅತಿಥಿಗಳೂ, ಖ್ಯಾತ ವೈದ್ಯರೂ ಆದ ಸನ್ಮಾನ್ಯ ಶ್ರೀ ಶಂಕರಲಿಂಗಯ್ಯರವರು ಮಾತನಾಡಿ ಮಕ್ಕಳು ತಮ್ಮ ಆರೋಗ್ಯಕ್ಕೆ ಹೆಚ್ಚಿನ ಕಾಳಜಿವಹಿಸಬೇಕೆಂದು ತಿಳಿಸಿದರು. ಶಾಲೆಯ ಜಂಟಿ ಕಾರ್ಯದರ್ಶಿಗಳಾದ ಸನ್ಮಾನ್ಯ ಶ್ರೀ ಬಿ. ಸಿದ್ದಲಿಂಗಯ್ಯರವರು ಮಾತನಾಡಿ ಉತ್ತಮ ಕಲೆ, ಸಾಹಿತ್ಯ, ಸಂಗೀತ, ಸಂಸ್ಕೃತಿಗಳ ನಾಡು ನಮ್ಮ ಬೀಡು. ಇಂತಹ ಸಂಪದ್ಭರಿತ ನಾಡಿನ ಸ್ವಾತಂತ್ರ್ಯವನ್ನು ನಾವು ಉಳಿಸಿಕೊಂಡು ಬೆಳೆಸಿಕೊಂಡು ಹೋಗಬೇಕು ಎಂದು ತಿಳಿಯಪಡಿಸಿದರು. ಕಾರ್ಯಕ್ರಮದಲ್ಲಿ ಶಾಲೆಯ ಕಾರ್ಯದರ್ಶಿಗಳಾದ ಸನ್ಮಾನ್ಯ ಶ್ರೀ ಬಿ.ಎನ್. ಚನ್ನಪ್ಪರವರು ಮತ್ತು ಶಾಲೆಯ ಜಂಟಿ ಕಾರ್ಯದರ್ಶಿಗಳಾದ ಸನ್ಮಾನ್ಯ ಶ್ರೀ ರಂಗಹನುಮಯ್ಯ ರವರು ಉಪಸ್ಥಿತರಿದ್ದರು.

ನಂತರ ನಡೆದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಬಣ್ಣ ಬಣ್ಣದ ವೇಷ ತೊಟ್ಟ ಚಿಣ್ಣರು ''ಹಾರುತಿಹುದು ಏರುತಿಹುದು ನೋಡು ನಮ್ಮ ಭಾವುಟ'' ಎಂದು ಹೆಮ್ಮೆಯಿಂದ ಕುಣಿ ಕುಣಿದಾಡಿದರು. ಶಾಲೆಯ ಹಿರಿಯ ಮಕ್ಕಳು ನಿತ್ಯನೂತನಳಾದ ಭಾರತಾಂಬೆಯ ನಿತ್ಯೋತ್ಸವವನ್ನು ವರ್ಣಿಸಿ ಮನೋಹರವಾದ ನೃತ್ಯಮಾಡಿದರು. ದೇಶಭಕ್ತಿಯನ್ನು ಸಾರುವ ಗೀತೆಗಳನ್ನು ಮೈನವಿರೇಳಿಸುವಂತೆ ಸುಶ್ರಾವ್ಯವಾಗಿ ಹಾಡಲಾಯಿತು.

ಒಟ್ಟನಲ್ಲಿ ಭಾವೈಕ್ಯತೆಯೇ ಮೈದುಂಬಿ ಬಂದಂತಿದ್ದ ಕಾರ್ಯಕ್ರಮ ಕುಮಾರಿ ಸುಮಂಗಳರವರ ನಿರೂಪಣೆಯೊಂದಿಗೆ ಸಾಗಿ ಸುಧಾಮಣಿ ಯವರ ವಂದನಾರ್ಪಣೆಯೊಂದಿಗೆ ತೆರೆಕಂಡಿತು.

ವರದಿ : ಸುಧಾಮಣಿ





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿಧವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 1990. | ಶ್ರೀಮತಿ ಟಿ. ಅನ್ನಪೂರ್ಣ<br>ಟಿ.ಜಿ.ಎಂ.ಸಿ. ಬ್ಯಾಂಕ್ ಲಿ.,<br>ತುಮಕೂರು-1. | 5,001.00 |
| 1991. | ಶ್ರೀಮತಿ ಸವಿತಾ<br>ಕೋಂ. ಲಿಂ. ಎಸ್.ಜಿ. ನಾಗಭೂಷಣ<br>ಎಸ್.ಎನ್. ಪುರಂ, ತುಮಕೂರು. | 10,000.00 |
| 1992. | ಶ್ರೀ ನಾರಾಯಣಪ್ಪ<br>ಮುಖ್ಯ ಶಿಕ್ಷಕರು | 1,001.00 |
| 1993. | ಶ್ರೀ ಟಿ.ಸಿ. ಶಿವಕುಮಾರ್<br>ಸಹ ಶಿಕ್ಷಕರು | 1,001.00 |
| 1994. | ಶ್ರೀ ಕೆ. ಬಸವರಾಜಯ್ಯ<br>ಸಹ ಶಿಕ್ಷಕರು | 1,001.00 |
| 1995. | ಶ್ರೀ ಟಿ.ಪಿ. ದಕ್ಷಿಣಾಮೂರ್ತಿ<br>ಕನ್ನಡ ಶಿಕ್ಷಕರು | 2,000.00 |
| | ಕ್ರ.ಸಂ. 1992 ರಿಂದ 1995ರ ವರೆಗಿನ ವಿಳಾಸ<br>ಶ್ರೀ ಜಗದ್ಗುರು ರೇವಣಸಿದ್ಧೇಶ್ವರ ಗ್ರಾಮಾಂತರ ಪ್ರೌಢಶಾಲೆ,<br>ಎಣ್ಣೆಗೆರೆ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | |
| 1996. | ಶ್ರೀ ಕೆ.ಪಿ. ಶಿವಶಂಕರಯ್ಯ, ವೃ.ಶಿ.<br>ಶಿವನಹಳ್ಳಿ ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಬೆಂಗಳೂರು-10. | 2,001.00 |
| 1997. | ಶ್ರೀ ಎನ್. ಎಂ. ಪ್ರಕಾಶ್ | 2,001.00 |
| 1998. | ಶ್ರೀಮತಿ ಪಾರ್ವತಮ್ಮ<br>ಕೋಂ. ಎನ್.ಎಸ್. ಮಲ್ಲೇಶಪ್ಪ | 5,001.00 |
| | ಕ್ರ.ಸಂ. 1997 ರಿಂದ 1998ರ ವರೆಗಿನ ವಿಳಾಸ<br>ನಂ. 135, 'ಶೃತಿ', ಓಂ.ಎಂ.ಹೆಚ್. ಕಾಲೋನಿ,<br>ಟಿ. ದಾಸರಹಳ್ಳಿ, ಬೆಂಗಳೂರು – 560 057. | |
| 1999. | ಶ್ರೀ ಬಿ.ಎಸ್. ಸತೀಶ್ ಕೇರಾಫ್<br>ರಂಗಹನುಮಯ್ಯ,<br>ಮೈಸೂರು. | 1,001.00 |
| 2000. | ಶ್ರೀ ಆರ್. ರಾಮಸ್ವಾಮಿ<br>ಗೋಕುಲ, ಬೆಂಗಳೂರು – 54. | 5,001.00 |
| 2001. | ಶ್ರೀ ಗಂಗನರಸಿಂಗಯ್ಯ<br>ಬಿನ್ ವೆಂಕಟರಾಮಯ್ಯ,<br>ಸೊಂಡೆಕೊಪ್ಪ, ಬೆಂಗಳೂರು ಉ. ತಾ. | 2,101.00 |
| 2002. | ಶ್ರೀ ಎ. ನಾರಾಯಣರೆಡ್ಡಿ ಮತ್ತು<br>ಶ್ರೀ ಎ.ಎನ್. ಶಶಿಕುಮಾರ್<br>ಜೋಗುಪಾಳ್ಯ, ಅಲಸೂರು,<br>ಬೆಂಗಳೂರು – 560 008. | 20,000.00 |
| 2003. | ಶ್ರೀಮತಿ ಸಾಕಮ್ಮ ಕೆಂಪಯ್ಯ<br>ಗಾಯತ್ರಿನಗರ, ಬೆಂಗಳೂರು – 21. | 2,001.00 |
| 2004. | **Dr. P.S. Renukaradhya**<br>Professor, Civil Engg. | 3,135.00 |
| 2005. | **Sri S.M. Shashidara**<br>Professor, Mech. Engg. | 3,135.00 |
| 2006. | **Sri B.S. Basavarajaiah**<br>Professor, Elect. Engg. | 3,135.00 |
| 2007. | **Sri R. Vivekananda**<br>Professor, Elect. Engg. | 3,070.00 |
| 2008. | **Sri G.K. Suresh**<br>Professor, E & C Engg. | 3,070.00 |
| 2009. | **Sri G.A. Shashikumar**<br>Professor, I & E Engg. | 3,070.00 |
| 2010. | **Dr. M.N. Chandrashekaraiah**<br>Training & Place | 1,956.00 |
| 2011. | **Dr. T.R. Jagadeesh**<br>Professor, Civil Engg. | 2,865.00 |
| 2012. | **Dr. D.R. Somashekar**<br>Professor, I & P Engg. | 2,595.00 |
| 2013. | **Dr. K. Ramakrsihna**<br>Professor, Chem. Engg. | 2,665.00 |
| 2014. | **Dr. B. Siddalaingappa**<br>Professor, Physics | 2,665.00 |
| 2015. | **Sri Dr. Shivakumaraiah**<br>Professor, Chemistry | 2,800.00 |
| 2016. | **Dr. Joel Hemanth**<br>Professor, Mech. Engg. | 2,460.00 |
| 2017. | **Dr. B.B. Amberker**<br>Prof. Comp SCI & Engg. | 2,865.00 |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 2018. | Sri T.S. Nataraja Aradhya<br>Asst. Prof. Civil Engg. | 2,745.00 |
| 2019. | Sri G.R. Prasanna Kumar<br>Asst. Prof. Civil Engg. | 2,745.00 |
| 2020. | Sri K. Sreedhar<br>Asst. Prof. Architeture | 2,320.00 |
| 2021. | Sri N. Mahadeva Swamy<br>Asst. Prof. Mech Engg. | 2,745.00 |
| 2022. | Sri Balasubramanya<br>Asst. Prof. Mech Engg. | 2,706.00 |
| 2023. | Sri T.B. Udayashankararadhya<br>Asst. Prof. I & P Engg. | 2,620.00 |
| 2024. | Sri Rajendra<br>Asst. Prof. Elect Engg. | 2,196.00 |
| 2025. | Sri R. Venkatesh<br>Asst. Prof. Elect Engg | 2,745.00 |
| 2026. | Sri B. Sudarshan<br>Asst. Prof. E & C Engg. | 2,620.00 |
| 2027. | Sri D.N. Jayaram<br>Asst. Prof. E & C Engg. | 2,365.00 |
| 2028. | Sri R. John Stephen<br>Asst. Prof. I & E Engg. | 2,555.00 |
| 2029. | Sri S. Rajaguru<br>Asst. Prof. Chem Engg. | 2,745.00 |
| 2030. | Sri H.M. Shivaprakash<br>Asst. Prof. Chemistry | 2,680.00 |
| 2031. | Sri K. Mallikarjunappa<br>Asst. Prof. Mathamatics | 2745.00 |
| 2032. | Sri V. Shivakumar Shetty<br>Asst. Prof. Mathamatcis | 2,680.00 |
| 2033. | Sri N.M. Thipperudrappa<br>Asst. Prof. Civil Engg. | 2,050.00 |
| 2034. | Dr. K.P. Shivananda<br>Civil Engg. | 2,180.00 |
| 2035. | Dr. C. Sadashivaiah<br>Asst. Prof. Civil Engg. | 1,865.00 |
| 2036. | Sri Umashankar<br>Asst. Prof. Mech. Engg. | 2,050.00 |
| 2037. | Sri. M.S. Chandrashekara<br>Asst. Prof. Mech. Engg. | 2,050.00 |
| 2038. | Sri Vinayaka Vittal Pai<br>Asst. Prof. Mech. Engg. | 2,050.00 |
| 2039. | Sri. R. Suresh<br>Asst. Prof. Mech. Engg. | 2,050.00 |
| 2040. | Sri K.S. Shasishekar<br>Asst. Prof. Mech. Engg. | 2,050.00 |
| 2041. | Sri V. Shivaprasad<br>Asst. Prof. Elect. Engg. | 2,050.00 |
| 2042. | Sri K.P. Shivamurthy<br>Asst. Prof. Elect. Engg. | 2,050.00 |
| 2043. | Sri V. Siddeswara Prasad<br>Asst. Prof. I & E Engg. | 2,050.00 |
| 2044. | Sri. N.R. Sunitha<br>Comp SCI & Engg. | 2,050.00 |
| 2045. | Sri P. Nirguna Babu<br>Asst. Prof. Chem Engg. | 2,050.00 |
| 2046. | Sri M.A.L. Antony Raj<br>Asst. Prof. Chem. Engg. | 2,050.00 |
| 2047. | Sri K.L. Shivabasappa<br>Asst. Prof. Chem. Engg. | 2,050.00 |
| 2048. | Dr. H.K.T. Kumar<br>Asst. Prof. Physics | 2,495.00 |
| 2049. | Dr. N.G. Gowdru<br>Asst. Prof. Comp. Engg. | 2,050.00 |
| 2050. | Dr. H.P. Patil<br>Asst. Prof. Mathamatics | 1,800.00 |
| 2051. | Smt. R. Sumathi<br>Asst. Prof. Comp. Engg. | 2,050.00 |
| 2052. | Sri B. Satish Babu<br>Asst. Prof. Comp. Engg. | 2,050.00 |
| 2053. | Smt. M.V. Sudhamani<br>Asst. Prof. Comp. Engg. | 2,050.00 |

**S.L. No. 2004 to 2053 Addresses are belong to Siddaganga Institute of Technology, Tumkur.**

(ಮುಂದುವರೆಯುತ್ತವೆ)





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೪೫೪. | ಶ್ರೀ ಲಕ್ಷ್ಮೀನರಸಿಂಹಯ್ಯ<br>ವೃತ್ತಿ ಶಿಕ್ಷಕರು | ೧೦೦೦.೦೦ |
| ೧೪೫೫. | ಶ್ರೀ ಜಿ. ಚುಂಚಯ್ಯ<br>ಗ್ರೂಪ್ 'ಡಿ' ನೌಕರರು | ೧,೦೦೦.೦೦ |
| | ಕ್ರ.ಸಂ. ೧೪೫೪ ರಿಂದ ೧೪೫೫ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಸಂ. ಪ. ಪೂರ್ವ ಕಾಲೇಜು, ಪ್ರೌಢಶಾಲಾ ವಿಭಾಗ,<br>ಹಾಲನೂರು, ತುಮಕೂರು ತಾ. ೫೭೨ ೧೦೭. | |
| ೧೪೫೬. | ಶ್ರೀ ಬಿ. ಬಸವರಾಜು<br>ನಂ. ೪೯೨, ಶ್ರೀ ಬಸವೇಶ್ವರ ನಿಲಯ,<br>೯ನೇ ಕ್ರಾಸ್, ೨ನೇ ಮುಖ್ಯರಸ್ತೆ<br>ಮೈಕೋ ಲೇ ಔಟ್, ಬಿ.ಟಿ.ಎಂ. ೨ನೇ ಹಂತ,<br>ಬೆಂಗಳೂರು. | ೧,೦೦೧.೦೦ |
| ೧೪೫೭. | ಶ್ರೀ ಜೆ.ಎಂ. ರೇವಣಸಿದ್ಧಪ್ಪ<br>ನಂ. ಎ-೩, 'ಶಾಂತಿನಿಕೇತನ ಅಪಾರ್ಟ್‌ಮೆಂಟ್',<br>ಟಿ. ದಾಸರಹಳ್ಳಿ, (ಎಸ್.ಎಂ. ರಸ್ತೆ),<br>ಬೆಂಗಳೂರು – ೫೬೦ ೦೫೭. | ೧,೦೦೧.೦೦ |
| ೧೪೫೮. | ಶ್ರೀ ಶಿವಯೋಗಿ ಸಿದ್ಧರಾಮಸ್ವಾಮಿಗಳು<br>ಬೆಳಗುಂಬ ಕ್ಷೇತ್ರ, ಶಿವಯೋಗಿಮಠ,<br>ಕಸಬಾ ಹೋಬಳಿ, ತುಮಕೂರು ತಾ. | ೧,೦೦೧.೦೦ |
| ೧೪೫೯. | ಶ್ರೀ ಐ.ಆರ್. ಪೂರ್ಣಿಮಾ<br>ಕೋಂ. ಬಿ.ಜಿ. ಲೋಕೇಶ್<br>ನಂ. ೧೨೬, ೧೦ನೇ ಕ್ರಾಸ್,<br>ಆದರ್ಶ ಲೇ ಔಟ್, ಡಬ್ಲ್ಯೂ.ಓ.ಸಿ. ರಸ್ತೆ<br>೩ನೇ ಸ್ಟೇಜ್, ಬಸವೇಶ್ವರನಗರ,<br>ಬೆಂಗಳೂರು – ೫೬೦ ೦೭೯. | ೧೦೦೧.೦೦ |
| ೧೪೬೦. | ಶ್ರೀಮತಿ ಶೋಭಾ ಎಸ್.ಆರ್. ಬೆಟ್ಟಯ್ಯ<br>ನಂ. ೨೦೦೦, ೯ನೇ ಕ್ರಾಸ್, ನೆಹರು ಸ್ಕೂಲ್<br>ಸಮೀಪ, ತುಮಕೂರು. | ೧,೦೦೧.೦೦ |
| ೧೪೬೧. | ಶ್ರೀ ಬಿ. ಶಿವರುದ್ರಯ್ಯ<br>ಕೇರಾಫ್ ಎಂ.ಜಿ. ಹೊನ್ನಪ್ಪ<br>ಗೀತಾ ನಿಲಯ, ೧ನೇ ಮೈನ್,<br>೧ನೇ ಕ್ರಾಸ್, ಸಿದ್ಧಗಂಗಾ ಬಡಾವಣೆ,<br>ತುಮಕೂರು. | ೧,೦೦೦.೦೦ |
| ೧೪೬೨. | ಶ್ರೀ ಎಸ್. ಮರುಳಪ್ಪ<br>ಜಿ.ಇ. ನಿವೃತ್ತ ಎಕ್ಸಿಕ್ಯೂಟಿವ್ ಇಂಜಿನಿಯರ್,<br>ನಂ. ೪೯೧, ೭ನೇ ಕ್ರಾಸ್, ಜಯನಗರ,<br>ಬೆಂಗಳೂರು. | ೧,೦೦೧.೦೦ |
| ೧೪೬೩. | ಶ್ರೀ ಆರ್. ಶಿವಲಿಂಗಯ್ಯ<br>ಇಸುವನಹಳ್ಳಿ, ದೊಡ್ಡಬೆಲೆ ಅಂಚೆ,<br>ನೆಲಮಂಗಲ ತಾ.<br>ಬೆಂಗಳೂರು ಗ್ರಾ. ಜಿಲ್ಲೆ. | ೧,೦೦೦.೦೦ |
| ೧೪೬೪. | ಶ್ರೀ ಎ.ಆರ್. ರುದ್ರಪ್ಪ<br>ನಂ. ೧೯೩., ೭ನೇ ಅಡ್ಡರಸ್ತೆ,<br>ಕುಮಾರಸ್ವಾಮಿ ಲೇ ಔಟ್, ಮೊದಲನೇ ಹಂತ,<br>ಬೆಂಗಳೂರು – ೭೮. | ೧,೦೦೧.೦೦ |
| ೧೪೬೫. | ಶ್ರೀಮತಿ ವತ್ಸಲ ನಂಜುಂಡಯ್ಯ<br>ನಂ. ೧೨೪, ಬಿ. ೧೨ನೇ ಮುಖ್ಯರಸ್ತೆ,<br>೧ನೇ ಬ್ಲಾಕ್, ರಾಜಾಜಿನಗರ,<br>ಬೆಂಗಳೂರು – ೧೦. | ೧,೦೦೧.೦೦ |
| ೧೪೬೬. | ಶ್ರೀಮತಿ ಶಕುಂತಲಜಯದೇವ<br>ನಂ. ೧೧೮, ೨೯ನೇ ಮುಖ್ಯರಸ್ತೆ,<br>೬ನೇ ಕ್ರಾಸ್, ಬಿ.ಟಿ.ಎಂ. ಬಡಾವಣೆ,<br>೨ನೇ ಹಂತ, ಬೆಂಗಳೂರು - ೭೦. | ೧,೦೦೦.೦೦ |
| ೧೪೬೭. | ಶ್ರೀ ಹೆಚ್.ಜಿ. ಪುಟ್ಟಗಂಗಾಬಿಕೆ<br>ಹಿಂದಿ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾ. ಪ್ರೌಢಶಾಲೆ,<br>ಹಿರೇಹಳ್ಳಿ, ತುಮಕೂರು ತಾ. | ೧,೦೦೧.೦೦ |
| ೧೪೬೮. | ಶ್ರೀ ಹೆಚ್.ಎ. ನಟರಾಜು<br>ಮುಖ್ಯ ಶಿಕ್ಷಕರು,<br>ಶ್ರೀ ಶಾಲಿವಾಹನ ಸಂಸ್ಕೃತ ಪಾಠಶಾಲೆ,<br>ತಂಡಗ – ೫೭೨ ೨೨೪,<br>ತುರುವೇಕೆರೆ ತಾ. | ೧,೦೦೧.೦೦ |
| ೧೪೬೯. | ಶ್ರೀ ಎಸ್. ನಂಜೇಗೌಡ<br>ನಿವೃತ್ತ ಮುಖ್ಯ ಶಿಕ್ಷಕರು,<br>ಹುರುಗಗೆರೆ, ಸಿ.ಎಸ್. ಪುರ ಹೋಬಳಿ,<br>ಗುಬ್ಬಿ ತಾ. ತುಮಕೂರು ಜಿಲ್ಲೆ. | ೧,೦೦೧.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೪೭೦. | ಶ್ರೀ ಎನ್. ಶಿವಣ್ಣನವರು<br>ಬಿನ್ ಪುಟ್ಟಯ್ಯ<br>ಹೊರಪೇಟೆ, ತುಮಕೂರು ನಗರ,<br>ತುಮಕೂರು – ೫೭೨ ೧೦೧. | ೧,೦೦೧.೦೦ |
| ೧೪೭೧. | ಶ್ರೀ ಕೆ.ವಿ. ದೇವರಾಜು<br>ದ್ವಿ.ದ.ಸ.,<br>ಶ್ರೀಮಂಜುನಾಥ ಬಾಲಕಿಯರ ಪ್ರೌಢಶಾಲೆ,<br>ನೆಲಮಂಗಲ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೧೪೭೨. | ಶ್ರೀ ಸಿ. ಗುರುಸ್ವಾಮಿ<br>ಮಾಜಿ ಶಾಸಕರು,<br>ಚಾಮರಾಜನಗರ. | ೧,೦೦೦.೦೦ |
| ೧೪೭೩.. | ಶ್ರೀ ಪಿ.ಎಂ. ಬಸಪ್ಪ<br>ಮಲಿಗುಣಹಳ್ಳಿ, ಅಲ್ಲಿಪುರ ಅಂಚೆ,<br>ಗೌರಿಬಿದನೂರು ತಾ. ಕೋಲಾರ ಜಿ. | ೧,೦೦೧.೦೦ |
| ೧೪೭೪. | ಶ್ರೀ ಎಸ್. ಬಸವಯ್ಯ<br>ಬಿನ್. ಶ್ರೀ ಪುಟ್ಟಸ್ವಾಮಯ್ಯ<br>ಚಂಪಕನಗರ, ಸಕಲೇಶಪುರ ತಾ.<br>ಹಾಸನ ಜಿಲ್ಲೆ. | ೩,೦೦೫.೦೦<br>(ಲೈಫ ಮೆಂಬರ್) |
| ೧೪೭೫. | ಶ್ರೀ ಎಸ್.ಬಿ. ಶಿವಕುಮಾರ್<br>ಬಿನ್ ಎಸ್. ಬಸಪ್ಪಗೌಡ,<br>ನಾರ್ವೇ ಅಟ್ ಅಂಡ್ ಪೋಸ್ಟ್,<br>ಬೇಲೂರು ತಾ. ಹಾಸನ ಜಿಲ್ಲೆ. | ೨,೦೦೧.೦೦ |
| ೧೪೭೬. | ಶ್ರೀ ಬಿ. ಬಸವರಾಧ್ಯ<br>ಕಂಚುಗಲ್ ಬಂಡೇಮಠ,<br>ಬಾಣವಾಡಿ ಅಂಚೆ, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾ. ಜಿಲ್ಲೆ. | ೧,೫೦೧.೦೦ |
| ೧೪೭೭. | ಶ್ರೀಮತಿ ದೇವಮ್ಮ ಕೋಂ.<br>ಕವುರಿ ಬಸವೇಗೌಡ ಮತ್ತು ಮಕ್ಕಳು<br>ಗಂಗವಾರ, ತೊಳಲು ಅಂಚೆ,<br>ಬೇಲೂರು ತಾಲ್ಲೂಕು,<br>ಹಾಸನ ಜಿಲ್ಲೆ. | ೧,೦೧೦.೦೦ |
| ೧೪೭೮. | ಶ್ರೀ ಎಂ. ಶಿವರುದ್ರಯ್ಯ<br>ಅಧ್ಯಕ್ಷರು,<br>ಶ್ರೀ ವರಪ್ರಸಾದ ಆಂಜನೇಯಸ್ವಾಮಿ ದೇವಸ್ಥಾನ<br>ಟ್ರಸ್ಟ್, ಬನಶಂಕರಿ, ಕನಕಪುರ ರಸ್ತೆ,<br>ಬೆಂಗಳೂರು - ೫೬೦ ೦೮೨. | ೫,೦೦೧.೦೦ |
| ೧೪೭೯. | ಶ್ರೀ ಜಿ.ಎಲ್. ರಾಮಕೃಷ್ಣಯ್ಯ<br>ಬಿನ್ ಕಪನಿಪತಯ್ಯ<br>ಸಹಶಿಕ್ಷಕರು,<br>ಕರ್ನಾಟಕ ನವಚೇತನ ಅಂಧಮಕ್ಕಳ ಶಾಲೆ,<br>ಕುಣಿಗಲ್, ತುಮಕೂರು ಜಿಲ್ಲೆ. | ೧,೦೦೧.೦೦ |
| ೧೪೮೦. | ಶ್ರೀ ಬಿ.ಎನ್. ಪಾಲಾಕ್ಷ<br>ಹಿಂದಿ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ತೋಟಗೆರೆ, ಬೆಂಗಳೂರು ಉತ್ತರ. | ೧,೦೦೦.೦೦ |
| ೧೪೮೧. | ಶ್ರೀ ಬಿ. ನಾಗರಾಜು<br>ಕಿರಿಯ ತರಬೇತಿ ಅಧಿಕಾರಿಗಳು | ೧,೦೦೦.೦೦ |
| ೧೪೮೨. | ಶ್ರೀ ಐ. ಸಿದ್ದಪ್ಪ<br>ಕಿರಿಯ ತರಬೇತಿ ಅಧಿಕಾರಿಗಳು | ೧,೦೦೦.೦೦ |
| ೧೪೮೩. | ಶ್ರೀ ಸಿ.ಆರ್. ಯೋಗೀಶ್‌ಪ್ರಸಾದ್<br>ಕಿರಿಯ ತರಬೇತಿ ಅಧಿಕಾರಿಗಳು | |

ಕ್ರ.ಸಂ. ೧೪೮೧ ರಿಂದ ೧೪೮೩ರ ವರೆಗಿನ ವಿಳಾಸ
ಶ್ರೀ ಸಿದ್ಧಗಂಗಾ ಕೈಗಾರಿಕಾ ತರಬೇತಿ ಸಂಸ್ಥೆ, ಕುಂಚಗಲ್ ಬಂಡೇಮಠ,
ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾ. ಜಿಲ್ಲೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೪೮೪.. | ಶ್ರೀ ಸಿ.ಎಸ್. ಸಿದ್ಧಲಿಂಗಯ್ಯನವರು<br>ನಂ. ೬೧೪೩., ೮ನೇ ಮುಖ್ಯರಸ್ತೆ,<br>೧ನೇ ಅಡ್ಡರಸ್ತೆ, ಅಶೋಕನಗರ,<br>ತುಮಕೂರು – ೫೭೨೧೦೨. | ೨,೦೦೧:೦೦ |
| ೧೪೮೫. | ಶ್ರೀ ಸಿ. ಚಂದ್ರಶೇಖರಯ್ಯ<br>ಸಹ ಶಿಕ್ಷಕರು,<br>ಶ್ರೀ ಶಿವಕುಮಾರಸ್ವಾಮಿ ಗ್ರಾ. ಪ್ರೌಢಶಾಲೆ,<br>ಬ್ಯಾಲಕೆರೆ, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೧೪೮೬. | ಶ್ರೀ ಜಗದೀಶ್<br>ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಪಾಠಶಾಲೆ,<br>ಗಂಜಲಗುಂಟೆ, ಮಧುಗಿರ ತಾ. | ೨,೧೦೫.೦೦ |

*(ಮುಂದುವರೆಯುತ್ತದೆ)*

ವೀರನಾದರೆ ಅಲಗಿನ ಮೊನೆಯಲ್ಲಿ ಕಾಣಬಹುದು
ಧೀರನಾದರೆ ನನ್ನ ಸೋಂಕಿನಲ್ಲಿ ಅರಿಯಬಹುದು
ಭಕ್ತನಾದರೆ ನಾನು ನಿರೋಧದಲ್ಲಿ ಅರಿಯಬಹುದು
ಕೂಡಲಚೆನ್ನಸಂಗಯ್ಯಾ,
ಸುಜ್ಞಾನಿಯಾದಡೆ ಸುಳುಹಿನಲ್ಲಿ ಅರಿಯಬಹುದು.

- ಚೆನ್ನಬಸವಣ್ಣ

RNI No. 17139/69

"Siddaganga" Monthly - Postal Reg. No. KA/SK/TMR/385/2003-05



ಬೆಂಗಳೂರು ಲೀಡರ್ಸ್ ಸಂಸ್ಥೆಯ ಮುಖ್ಯಸ್ಥ
ವಿ. ಬಾಲಕೃಷ್ಣನ್ ಅವರು ಶ್ರೀಮಠದ ಪ್ರಾರ್ಥನಾ
ಸಭೆಯಲ್ಲಿ ಭಾಗವಹಿಸಿದ್ದರು. ಇಂಜಿನೀಯರ್
ಶ್ರೀ ಸಿ.ವಿ. ಕುಮಾರಸ್ವಾಮಿ ಹಾಜರಿದ್ದರು




ತುಮಕೂರು ಶಿರಾ ಗೇಟ್‌ನಲ್ಲಿ ಶ್ರೀ ಚಾಮುಂಡೇಶ್ವರಿ
ಶಕ್ತಿಪೀಠ ಉದ್ಘಾಟನೆ ಮತ್ತು ೧೫ ಅಡಿ ಎತ್ತರದ ಈಶ್ವರ
ಮೂರ್ತಿಯ ಪ್ರತಿಷ್ಠಾಪನೆಯನ್ನು ಶ್ರೀ ಶ್ರೀಗಳವರು
ನೆರವೇರಿಸಿದರು.



ರಾಜ್ಯ ಸಂಗೀತ ಮತ್ತು ನೃತ್ಯ ಆಕಾಡೆಮಿ ಅಧ್ಯಕ್ಷ ಪಂಡಿತ್
ರಾಜಶೇಖರ್ ಮಲ್ಲಿಕಾರ್ಜುನ ಮನ್ಸೂರ್ ಸಿದ್ಧಗಂಗಾ
ಶ್ರೀಮಠಕ್ಕೆ ಭೇಟಿ ನೀಡಿದ್ದರು. ಶ್ರೀ ಸೋಮು ಬಿ. ಆಚಾರ್,
ಎಸ್.ಕೆ. ಸ್ವಾಮಿ, ಬಲವಂತರಾವ್ ಪಾಟೀಲ್,
ರೇವಣಸಿದ್ಧಪ್ಪ ಹೆಚ್.ವಿ. ವೀರಭದ್ರಯ್ಯ ಡಿ.ಎಸ್.
ನಾಗರಾಜು ಹಾಜರಿದ್ದರು.



ಮಾಜಿ ಪ್ರಧಾನಿ ಶ್ರೀ ಹೆಚ್.ಡಿ. ದೇವಗೌಡರು
ಇತ್ತೀಚೆಗೆ ಸಿದ್ಧಗಂಗಾ ಮಠಕ್ಕೆ ಭೇಟಿ ನೀಡಿ ಪೂಜ್ಯ
ಶ್ರೀ ಶ್ರೀಗಳವರಿಗೆ ಗೌರವ ಸಲ್ಲಿಸಿದರು.



ಬೆಂಗಳೂರು E ಪರಿಸರದ ವ್ಯವಸ್ಥಾಪಕ ನಿರ್ದೇಶಕ
ಶ್ರೀ ಪಾರ್ಥಸಾರಥಿಯವರು ಶ್ರೀಮಠಕ್ಕೆ ಭೇಟಿ ನೀಡಿದ್ದರು.
ಇಂ. ಶ್ರೀ ಗೋಪಾಲ್, ಶ್ರೀ ಪಿ.ಎಸ್. ಪುಟ್ಟಶಂಕರಯ್ಯ
(ಎ.ಓ.) ಹಾಜರಿದ್ದರು.



ಶ್ರೀ ಸಿದ್ಧಲಿಂಗ ಸ್ವಾಮಿಗಳು ತುಮಕೂರು ಜಿಲ್ಲಾ
ಪ್ರೌಢಶಾಲಾ ಮುಖ್ಯಸ್ಥರ ಮತ್ತು ಸಂಯುಕ್ತ ಪದವಿಪೂರ್ವ
ಕಾಲೇಜುಗಳ ಮುಖ್ಯಸ್ಥರ ಸಂಘದ ವತಿಯಿಂದ ಸಿದ್ಧಗಂಗಾ
ಮಠದಲ್ಲಿ ಶೈಕ್ಷಣಿಕ ಸಮ್ಮೇಳನವನ್ನು ಉದ್ಘಾಟಿಸಿದರು.

Printed at: Geetanjali Graphics #4, M.S.R. Indl Estate, Bangalore - 54. Ph: 23604087